

# ಹಿಂಗಾರ



ಕರ್ನಾಟಕ ಸರ್ಕಾರ

ಅರೆಭಾಷೆ ತ್ರೈಮಾಸಿಕ

ಸಂಪುಟ-3 ಸಂಚಿಕೆ-9 ದಿನಾಂಕ : 31.03.2019 ಕೊಡಗು ರೂ. 20/

ಜನವರಿ-ಫೆಬ್ರವರಿ-ಮಾರ್ಚ್
2019

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ





20.01.2019 ರಂದ್ ಮಯೂರ ಕಲಾಮಂದಿರ ಕೊಲ್ಲಮೊಗ್ರಲಿನಡ್ಡ ಪುಸ್ತಕಗಳ ಬಿಡುಗಡೆ





17.02.2019 ರಂದ್ ದುಗ್ಗಲಡ್ಕಲಿ ನಡ್ದ ಜನಪದ ಆಟ-ಕೂಟದ ಸಮಾರಂಭ

"**HINGARA**" A quarterly on Arebashe Language, Litereature and Culture, Published by 'Karnataka Arebashe Samskruthi Mathu Sahithya Academy' Madikeri - 571201

ಪ್ರಕಟಣೆ : ಜನವರಿ-ಫೆಬ್ರವರಿ-ಮಾರ್ಚ್-2019

ಪುಟಗಳು : 80
ಬೆಲೆ : ರೂ. 20/-

ಎಲ್ಲಾ ಹಕ್ಕನ್ನು ಕಾಯ್ದಿರಿಸಿದೆ.
All Rights Reserved.

ಪ್ರಕಟಣೆ :
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,**
'ಕಾಫಿ ಕೃಪಾ' ಕಟ್ಟಡ, 1ನೇ ಮಹಡಿ, ರಾಜಾಸೀಟ್ ರಸ್ತೆ,
ಮಡಿಕೇರಿ, ಕೊಡಗು ಜಿಲ್ಲೆ.

ಪುಸ್ತಕ ಸಿಗುವ ಸ್ಥಳ :
**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ,**
'ಕಾಫಿ ಕೃಪಾ' ಕಟ್ಟಡ, 1ನೇ ಮಹಡಿ, ರಾಜಾಸೀಟ್ ರಸ್ತೆ,
ಮಡಿಕೇರಿ, ಕೊಡಗು ಜಿಲ್ಲೆ.
ದೂರವಾಣಿ ಸಂಖ್ಯೆ : 08272-223055

ಮುದ್ರಕರು:
ಶ್ರೀ ಕೃಷ್ಣ ಕಂಪ್ಯೂಟರ್ಸ್ & ಪ್ರಿಂಟರ್ಸ್,
ಪೂಜಾ ಆರ್ಕೇಡ್,
ಜೂನಿಯರ್ ಕಾಲೇಜ್ ರಸ್ತೆ, ಮಡಿಕೇರಿ.
Ph. 08272-224919, 9448135592



# ಹಿಂಗಾರ

ಕರ್ನಾಟಕ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
ಮಡಿಕೇರಿ

ಪ್ರಧಾನ ಸಂಪಾದಕರ್

ಪಿ.ಸಿ. ಜಯರಾಮ

ಸಂಪಾದಕರ್

ಬಾರಿಯಂಡ ಜೋಯಪ್ಪ

ಪ್ರಕಾಶಕರ್

ಚಂದ್ರಹಾಸ ರೈ ಬಿ.



# ಅಧ್ಯಕ್ಷರ ಮಾತ್



ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಇಲ್ಲಿ ಮುಟ್ಟ ಹದ್ನೇಳ್ ಕಾರ್ಯಕ್ರಮಗಳ ನಡ್ಸಿಟು. ಹಿಂದೆ ವಿಧಾನ ಸಭೆನ ಚುನಾವಣೆಯ ನೀತಿಸಂಹಿತೆ ಹಿನ್ನೆಲೆಲಿ ಮತ್ತೆ ಮಹಾಮಳೆಯ ಹಿನ್ನೆಲೆಲಿ ಜಾಸ್ತಿ ಕಾರ್ಯಕ್ರಮಗಳ ನಡ್ಸಿಕಾತ್ಲೆ. ಈಗ ಲೋಕಸಭಾ ಚುನಾವಣೆಯ ನೀತಿ ಸಂಹಿತೆ ಹಿನ್ನೆಲೆಲೂ ಕಾರ್ಯಕ್ರಮ ನಡ್ಸಿಕಾತ್ಲೆ.

ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಸ್ವಾಗತ ಸಮಿತಿ ಅರೆಭಾಷೆ ಸಾಹಿತ್ಯ ಸಮ್ಮೇಳನ ಅಲ್ಲದೆ ಗೌಡರ ಯುವ ಸೇವಾ ಸಂಘ (ರಿ.) ಸುಳ್ಯ ಇದರ ಕೂಡುಕೂಟಲಿ ಸುಳ್ಯಲಿ ಸುರೂನ ಅರೆಭಾಷೆ ಸಾಹಿತ್ಯ ಸಮ್ಮೇಳನ 2019ರ ಮಾರ್ಚ್ ತಿಂಗಲಿ ನಡ್ಸಲಾತ್. ಈ ಸಮ್ಮೇಳನ ವಿಜೃಂಭಣೆಯಾಗಿ ನಡ್ಸಿ ಯಶಸ್ವಿ ಮಾಡ್ದ ಪ್ರತಿಯೊಬ್ಬರಿಗೂ ನನ್ನ ಧನ್ಯವಾದಗ.

ನಮ್ಮ ಸಂಸ್ಕೃತಿನ ಉಳ್ಸೊಕು, ನಮ್ಮ ಸಾಹಿತ್ಯನ ಬೆಳ್ಸೊಕು. ಬರಹಗಾರರ್ ಹೆಚ್ಚಾಗಿ ಮುಂದೆ ಬರೊಕು. ಓದುಗರ ಸಂಖ್ಯೆ ಜಾಸ್ತಿ ಆಕು. ಅಕಾಡೆಮಿ ಕಾರ್ಯಕ್ರಮಗ ಪ್ರತೀ ಹಳ್ಳಿ ಹಳ್ಳಿಲೂ ಆಕು. ರಾಜ್ಯ ಹೊರ ರಾಜ್ಯಗಳ್ಲೊ ಕಾರ್ಯಕ್ರಮ ನಡೆಕುಟ್ಟು.

ಅರೆಭಾಷೆ ಅಕಾಡೆಮಿ ಪ್ರಕಟಿಸಿದ ಪುಸ್ತಕ ಬುಡುಗಡೆ ಸಮಾರಂಭ 20-01-2019ರಂದ್ ಕೊಲ್ಲಮೊಗ್ರದ ಮಯೂರ ಕಲಾಮಂದಿರಲಿ ನಡ್ತ್.

2018ನೇ ಸಾಲ್‌ನ ಗೌರವ ಪ್ರಶಸ್ತಿನ 03-02-2019ರಂದ್ ಒಕ್ಕಲಿಗ ಗೌಡ ಸಮುದಾಯ ಭವನ, ತೆಂಕಿಲ, ಪುತ್ತೂರ್‌ಲಿ ಪ್ರದಾನ ಮಾಡಲಾತ್. ಪ್ರೊ. ಕೋಡಿ ಕುಶಾಲಪ್ಪ ಗೌಡ, ಡಾ। ಸುಕುಮಾರ ಗೌಡ ಮತ್ತೆ ಶ್ರೀಮತಿ ಕಾಳೆಯಂಡ ತಂಗಮ್ಮ ಇವು ಪ್ರಶಸ್ತಿಗೆ ಭಾಜನರಾದವು. ಆ ಹಿರಿಯವ್ಕೆ ಅಭಿನಂದನೆಗ.

ಈ ಸತಿ ಹತ್ತ್ ಜನ ವಿದ್ವಾಂಸರಿಗೆ ಫೆಲೋಶಿಫ್ ಕೊಟ್ಟುಟು. ಮಡಿಕೇರಿ ಆಕಾಶವಾಣಿಲಿ ಅರೆಭಾಷೆ ಕಾರ್ಯಕ್ರಮ ಬರುತುಟ್ಟು. ಹಾಂಗೆ ಮಂಗಳೂರು ಆಕಾಶವಾಣಿಲೂ ಸನ ಅರೆಭಾಷೆ ಕಾರ್ಯಕ್ರಮ ಬರುವಂಗೆ ಆಕು. ಆ ನಿಟ್ಟ್‌ಲಿ ಪ್ರಯತ್ನ ನಡೀತುಟ್ಟು.

ಎಲ್ಲವ್ಕೂ ಹೊಸ ವರ್ಷ ಕುಸಿ ತರ್ಲಿ. ಒಳ್ಳ ಆರೋಗ್ಯ, ಒಳ್ಳ ಸಂಪತ್ತ್ ಕೂಡಿ ಬರ್ಲಿತ ಶುಭ ಹಾರೈಸಿನೆ.

✍ ಪಿ.ಸಿ. ಜಯರಾಮ
ಅಧ್ಯಕ್ಷರ್.

# ಸಂಪಾದಕೀಯ



'ಹಿಂಗಾರ'ಕ್ಕೆ ಈಗ ಮೂರ್ ವರ್ಷದ ಪ್ರಾಯ. ಇದ್ ಜನವರಿ–ಫೆಬ್ರವರಿ–ಮಾರ್ಚ್ 2019ರ ಸಂಚಿಕೆ. ಸಂಪುಟ ಮೂರು. ಸಂಚಿಕೆ ಒಂಬತ್ತ್. ನೀವ್ಗೆಲ್ಲವ್ಕೂ ಹೊಸ ವರ್ಷದ ಶುಭಾಶಯಗ.

ಕರ್ನಾಟಕ ರಾಜ್ಯ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಸ್ವಾಗತ ಸಮಿತಿ – ಅರೆಭಾಷೆ ಸಾಹಿತ್ಯ ಸಮ್ಮೇಳನ ಮತ್ತೆ ಗೌಡರ ಯುವಸೇವಾ ಸಂಘ (ರಿ.) ಸುಳ್ಯ ಇವರ ಕೂಡ್‌ಕೂಟಲಿ ಇತಿಹಾಸಲೇ ದಾಖಲೆನ ಸುರೂನ **ಅರೆಭಾಷೆ ಸಾಹಿತ್ಯ ಸಮ್ಮೇಳನ** ನಡ್ತ್. ಈ ಸಮ್ಮೇಳನ ಸುಳ್ಯದ ಕೊಡಿಯಾಲ್ ಬೈಲ್‌ಲಿರುವ ಗೌಡ ಸಮುದಾಯ ಭವನಲಿ 2019ರ ಮಾರ್ಚ್ ತಿಂಗಳ ಎರಡನೇ ಶನಿವಾರದಂದ್ ನಡ್ತ್.

**ಸುಮಾರ್ ನಾನೂರ್ ವರ್ಷಗಳಿಗೂ ಹಿಂದೆನ ಇತಿಹಾಸ ಇರುವ ಅರೆಭಾಷೆ ಸಂವಿಧಾನದ ಎಂಟನೇ ಪರಿಚ್ಛೇದಕ್ಕೆ ಸೇರ್‍ಸೊಕುತ್ತೇಳುವ ಒತ್ತಾಯ ಅಲ್ಲದೆ ಈ ಭಾಷಿಕ ಜನಾಂಗಕ್ಕೆ ಭಾಷಾ ಅಲ್ಪಸಂಖ್ಯಾತ ಸ್ಥಾನಮಾನ ಸಿಕ್ಕೊಕೂಂತೇಳ್ವ ಒತ್ತಾಯ ಮಾಡುವ ಸದಾಶಯದ ಈ ಸಮ್ಮೇಳನ ಯಶಸ್ವಿಯಾಗಿ ನಡ್ತ್. ಸಮ್ಮೇಳನ ಯಶಸ್ವಿಗೊಳಿಸಿದ ಎಲ್ಲವ್ಕೆ ಧನ್ಯವಾದಗ.**

ಈ ಮೇಲಿನ ಒತ್ತಾಯನ ಸಂಬಂಧಪಟ್ಟವು ಸರಕಾರದ ಮೇಲೆ ಮತ್ತೆ ಮತ್ತೆ ಒತ್ತಾಯ ಮಾಡ್ದರ ಮೂಲಕ 'ಪಸಲ್' ಸಿಕ್ಕುವಂಗೆ ಮಾಡುವ ಜವಾಬ್ದಾರಿ ಹಿರಿಯರ್‍ದಾಗುಟ್ಟು. ಇಲ್ಲರೆ ಸಮ್ಮೇಳನ ನಡ್ತ್, ಪೊರ್ಲಾಗಿ ಆತ್‌ತ್ತೇಳುವಷ್ಟಕ್ಕೆ ಆಗೋದೆ. ಸಮ್ಮೇಳನ ಮೇಲ್ಪಂಕ್ತಿ ಹಾಕುಟು. ಈಗ ಅರೆಭಾಷೆ ಅಕಾಡೆಮಿ, ಸ್ವಾಗತ ಸಮಿತಿ, ಗೌಡರ ಯುವ ಸೇವಾ ಸಂಘ ಮತ್ತೆ ಸಮ್ಮೇಳನದ ಸರ್ವಾಧ್ಯಕ್ಷರ್, ಅಲ್ಲದೆ ಸಮ್ಮೇಳನದ ಉದ್ಘಾಟನೆ ಮಾಡ್ದವು ಮುಖ್ಯ ನಂಟ್ರಾಗಿ ಬಂದವು ಸನ ಜವಾಬ್ದಾರರ್.

ಅರೆಭಾಷೆನ ಸಂವಿಧಾನದ ಎಂಟನೇ ಪರಿಚ್ಛೇದಕ್ಕೆ ಸೇರ್ಸುದು ಮತ್ತೆ ನಮ್ಮ ರಾಜ್ಯಲಿ ಭಾಷಾ ಅಲ್ಪಸಂಖ್ಯಾತ ಸ್ಥಾನಮಾನ ಸಿಕ್ಕುವಾಂಗೆ ಆಕೆ 2019ರ ಮಾರ್ಚ್ ತಿಂಗಳ ಎರಡನೇ ಶನಿವಾರಂದ ಮುಂದೆ ಎಷ್ಟ್ ವರ್ಷ ಬೇಕಾದು?

ಈ ಸಂಚಿಕೆಲಿ ಅರೆಭಾಷೆ ಸಾಹಿತ್ಯ ಸಮ್ಮೇಳನದ ಸರ್ವಾಧ್ಯಕ್ಷ ಶ್ರೀ ಕೆ. ಆರ್. ಗಂಗಾಧರನವು ಮಾಡ್ದ ದಾಖಲಾರ್ಹ ಭಾಷಣನ ಪ್ರಕಟಿಸಿಯೊಳೊ. ಹಿರಿಯರಾದ ಡಾ। ಕಾವೇರಿಮನೆ ಬೋಜಪ್ಪನವರ ಮತ್ತೆ ಶ್ರೀಮತಿ ಎಂ. ಜಿ. ಕಾವೇರಮ್ಮನವರ ಬರವಣಿಗೆ ಉಟ್ಟು. ಶ್ರೀಮತಿ ಸಂಗೀತ ರವಿರಾಜ್ ಅವು 'ತಬ್ಲಿ ಮಂಜ' ಕತೆ ಪುಸ್ತಕದ ವಿಮರ್ಶೆ ಮಾಡ್ಯೊಳೊ. ಕತೆ, ಕವನ, ಗಾದೆಗ ಒಳೊ. ಈ ಸತಿ ಕವನಗಳ ಸಂಖ್ಯೆ ಜಾಸ್ತಿ ಉಟ್ಟು.

ಅರೆಭಾಷಾಭಿಮಾನಿಗರಾದ ನಿಮ್ಮೆಲ್ಲರ ಮನೆಲೂ ಅರೆಭಾಷೆ ಪುಸ್ತಕಗ ಒಳೊನಾ? ಪ್ರತಿ ಮನೆಲೂ 'ಹಿಂಗಾರ' ಪುಸ್ತಕ ಉಟ್ಟಾ? ಇಲ್ಲದೆ ಹೋದರೆ ಅಕಾಡೆಮಿನ ಕಚೇರಿಗೆ ಬನ್ನಿ. ಪುಸ್ತಕ ತಕಣಿ, ಓದಿ, ಕುಸಿಪಡಿ. ನೆರೆಕರೆಯವ್ಕೂ ಹೇಳಿ. ನಿಮ್ಮ ಮನೆಗೆ ನಾವು ಬಾಕನ ನೀವು ತಕಂಡ ಪುಸ್ತಕಗಳ ನೋಡಿ ಕುಸಿಪಟ್ಟವೆ. ನಿಮ್ಮ ಅಭಿಮಾನಕ್ಕೆ ಧನ್ಯವಾದ ಹೇಳಿವೆ.

ಬಾರಿಯಂಡ ಜೋಯಪ್ಪ.
ಸಂಪಾದಕರ್.

'ಹಿಂಗಾರ'ಲಿ ಪ್ರಕಟ ಆದ ಬರಹಗಳಿಗೆ
ಆಯಾ ಬರಹಗಾರರೇ ಜವಾಬ್ದಾರರ್

# ಹಿಂಗಾರ ಒಡ್ಸ್‌ಕನ

# ಅರೆಭಾಷೆನ ಸುರೂನ ಸಾಹಿತ್ಯ ಸಮ್ಮೇಳನ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿವತಿಂದ ದಿನಾಂಕ 02.03.2019 ರಂದ್ ಸುಳ್ಯ ನಗರದ ಕೋಡಿಯಾಲ್ ಬೈಲ್‌ಲಿರುವ ಗೌಡ ಸಮುದಾಯ ಭವನಲಿ ಸುರೂನ ಅರೆಭಾಷೆ ಸಾಹಿತ್ಯ ಸಮ್ಮೇಳನ-2019 ನಡ್ತ್. ಸಮ್ಮೇಳನದ ಅಧ್ಯಕ್ಷತೆ ರಾಷ್ಟ್ರ ಪ್ರಶಸ್ತಿ ಪುರಸ್ಕೃತ ಶಿಕ್ಷಕರು ಆಗಿರುವ ಶ್ರೀ ಕೆ.ಆರ್. ಗಂಗಾಧರನವು ವಹಿಸಿದ್ದೊ.

## ಸಮ್ಮೇಳನದ ಮೆರವಣಿಗೆ

ಕೆ.ವಿ.ಜಿ. ಸಮುದಾಯ ಭವನ – ಅಮರಶ್ರೀ ಭಾಗ್, ಸುಳ್ಯ ಇಲ್ಲಿಂದ ಸಮ್ಮೇಳನದ ಮೆರವಣಿಗೆ ಸುರಾತ್. ಡಾ। ರೇಣುಕಾ ಪ್ರಸಾದ್ ಕೆ.ವಿ. ನಿರ್ದೇಶಕರ್, ರಾಜ್ಯ ಒಕ್ಕಲಿಗರ ಸಂಘ (ರಿ) ಬೆಂಗಳೂರು ಇವು ಮೆರವಣಿಗೆನ ಉದ್ಘಾಟನೆ ಮಾಡ್ದೊ. ಸಮ್ಮೇಳನದ ಅಧ್ಯಕ್ಷರಾದ ಶ್ರೀ ಕೆ.ಆರ್.ಗಂಗಾಧರನವು, ಅಕಾಡೆಮಿ ಅಧ್ಯಕ್ಷರಾದ ಶ್ರೀ ಪಿ.ಸಿ.ಜಯರಾಮ, ಶ್ರೀ ದಿನೇಶ್ ಮಡಪ್ಪಾಡಿ ಇವು ತೆರೆದ ವಾಹನಲಿ ಮೆರವಣಿಗೆಲಿ ಭಾಗವಹಿಸಿದ್ದೊ. ಅಲ್ಲದೆ, ಅಕಾಡೆಮಿ ಸದಸ್ಯರ್, ಸ್ವಾಗತ ಸಮಿತಿ ಸದಸ್ಯರ್, ಗೌಡರ ಯುವ ಸೇವಾ ಸಂಘ (ರಿ)ಸುಳ್ಯ ಇದರ ಪದಾಧಿಕಾರಿಗ ಮತ್ತಿತರ ಸಾರ್ವ ಜನಿಕರ್ ಮೆರವಣಿಗೆಲಿ ಪಾಲ್ಗೊಂಡಿದ್ದೊ.

## ಮೆರವಣಿಗೆ ವಿಶೇಷ ಆಕರ್ಷಣೆ

ನಾಸಿಕ್ ಬ್ಯಾಂಡ್, ಅರೆಭಾಷೆ ಸಂಸ್ಕೃತಿನ ಬಿಂಬಿಸುವ ಟ್ಯಾಬ್ಲೋಗ, ಸುಬೇದಾರ್ ಗುಡ್ಡೆಮನೆ ಅಪ್ಪಯ್ಯಗೌಡರ ವೇಷಭೂಷಣಲಿ ಕುದುರೆ ಮೇಲೆ ಕುದ್ದ್ ಮೆರವಣಿಗೆಗೆ ವಿಶೇಷ ಆಕರ್ಷಣೆಯಾಗಿದ್ದೊ.

## ರಾಷ್ಟ್ರ ಧ್ವಜಾರೋಹಣ

ಶ್ರೀಮತಿ ಶೀಲಾವತಿ ಮಾಧವ, ಅಧ್ಯಕ್ಷರ್, ನಗರ ಪಂಚಾಯತ್ ಸುಳ್ಯ ಇವು ಸಭಾಂಗಣದ ಮುಂಭಾಗಲಿ ರಾಷ್ಟ್ರ ಧ್ವಜಾರೋಹಣ ಮಾಡಿ ಕಾರ್ಯಕ್ರಮಕ್ಕೆ ಚಾಲನೆ ಕೊಟ್ಟೊ.

## ವಸ್ತು ಪ್ರದರ್ಶನ

ವಸ್ತುಪ್ರದರ್ಶನದ ಉದ್ಘಾಟನೆನ ಶ್ರೀ ಚನಿಯ ಕಲ್ತಡ್ಕ, ಅಧ್ಯಕ್ಷರ್, ತಾಲೂಕು ಪಂಚಾಯತ್, ಸುಳ್ಯ ಇವು ಮಾಡ್ದೊ. ಅರೆಭಾಷೆ ಸಂಸ್ಕೃತಿಗೆ ಸಂಬಂದಪಟ್ಟಂಗೆ ಹಳೆ ಕಾಲಲಿ ಉಪಯೋಗಿಸ್ತಿದ್ದ ವಸ್ತುಗಳ ಸಂಗ್ರಹಿಸಿ ಪ್ರದರ್ಶನಲಿ ಇಸಿದ್ದೊ.

## ಪುಸ್ತಕ ಪ್ರದರ್ಶನ

ಶ್ರೀ ಹರೀಶ ಕಂಜಿಪಿಲಿ ಇವು ಪುಸ್ತಕ ಪ್ರದರ್ಶನದ ಉದ್ಘಾಟನೆ ಮಾಡ್ದೊ. ಅಕಾಡೆಮಿ ಪ್ರಕಟಿತ ಪುಸ್ತಕಗಳ್ನ ಪ್ರದರ್ಶನಕ್ಕೆ ಇಸಿದ್ದೊ.

## ಸಮ್ಮೇಳನ ಉದ್ಘಾಟನಾ ಸಮಾರಂಭ

ಡಾ॥ ಚಿದಾನಂದ ಕೊಳಂಬೆ ಇವು ಸಮ್ಮೇಳನನ ಉದ್ಘಾಟಿಸಿ ಮಾತಾಡ್ದೊ. ಸನ್ಮಾನ್ಯ ಶ್ರೀ ಡಿ.ವಿ.ಸದಾನಂದ ಗೌಡರು ರಾಸಾಯನಿಕ ಗೊಬ್ಬರ ಮತ್ತು ಅಂಕಿ-ಅಂಶಗಳ ಸಚಿವರು, ಭಾರತ ಸರ್ಕಾರ ಇವು ಸಮ್ಮೇಳನಲಿ ಮಾತಾಡಿ "ಅರೆಭಾಷೆ

ಆಡುಭಾಷೆಯಾಗಿ ಹೆಚ್ಚು ಬೆಳೆಯೊಕು, ಭಾಷೆಯ ಬಗ್ಗೆ ಕೀಳರಿಮೆ ಬತ್ತ್, ಹೆಮ್ಮೆಂದ ಆಡಿರೆ ಭಾಷೆ ಬೆಳ್ದದೆ. ಲಿಪಿ ಇದ್ದ ಭಾಷೆ ಮಾತ್ರ ಶ್ರೇಷ್ಠ ಭಾಷೆ ಅಂತೇನೂ ಅಲ್ಲ, ಅರೆಭಾಷೆಯಂತ ಭಾಷೆಗ ನಮ್ಮ ಬರ್ದ್ಕ್‌ನ ಅಡಿಪಾಯ. ತಮ್ಮತನನ ಜಗತ್ತಿಗೆ ಸಾರುವ ಇಂತಹ ಭಾಷೆನ ಉಳಿಸೊಕುತಾದರೆ ಈ ಭಾಷೆನ ಆಡುವವರ ಸಂಖ್ಯೆ ಜಾಸ್ತಿಯಾಕು. ಇದ್ಕೆ ಪ್ರೇರಣೆ ಕೊಡುವ ಕೆಲಸನ ನಾವು ಮಾಡಿವೆ" ತ್ತೇಳ್ದೊ. ಅಲ್ಲದೆ, ಅರೆಭಾಷೆಗೆ ವಿಶೇಷ ಸಂಸ್ಕೃತಿ ಉಟ್ಟು. ಮಾತೃಭಾಷೆ ಹೃದಯದ ಭಾಷೆಯಾಗುಟ್ಟು. ಇದ್ ಹೆಚ್ಚು ಪ್ರಚಲಿತವಾದರೆ ವಿಸ್ತಾರಗೊಂಡದೆ. ಅರೆಭಾಷೆಗೆ ತುಂಬಾ ಚರಿತ್ರೆ ಉಟ್ಟು. ಇದ್ ಇನ್ನಷ್ಟು ವ್ಯಾಪಕ ಆಕತ್ತ ಹೇಳ್ದೊ.

### ಪುಸ್ತಕ ಬಿಡುಗಡೆ

ಪ್ರೊ. ಕೆ. ಕುಶಾಲಪ್ಪಗೌಡ ಇವು ಬರ್ದ "ಅರೆಬಾಸೆ (ಗೌಡ ಕನ್ನಡ)ವ್ಯಾಕರಣ" ಡಾ. ಪುನೀತ್ ರಾಘವೇಂದ್ರ, ಕುಂಟುಕಾಡ್, ಇವು ಬರ್ದ "ಮಿಣ್ಕುಳಿ" (ಅರೆಬಾಸೆ ಕತೆಗಳ ಜೊಂಪೆ) ಶ್ರೀ ಪಿ.ಜಿ.ಅಂಬೆಕಲ್ ಇವು ಬರ್ದ "ತಬ್ಲಿ ಮಂಜ" (ಅರೆಬಾಸೆ ಕತೆಗಳ ಜೊಂಪೆ) ಡಾ. ಕರುಣಾಕರ ನಿಡಿಂಜಿ ಇವು ಬರ್ದ 'ನೆಗೆಬೇಕು ಕೇದಗೆ ಗೊನೆಹಾಂಗೆ' (ಅರೆಬಾಸೆ ಕವನ ಸಂಕಲನ) ಶ್ರೀ ಭವಾನಿಶಂಕರ ಅಡ್ತಲೆ ಇವು ಬರ್ದ 'ಅಪ್ಪ ಹೇಳ್ದ ಹತ್ತ್ ಕತೆಗ' ಈ ಐದು ಪುಸ್ತಕಗಳ್ನ ಶ್ರೀ ಎಸ್.ಅಂಗಾರ ಮಾನ್ಯ ಶಾಸಕರು, ಸುಳ್ಯ ವಿಧಾನಸಭಾ ಕ್ಷೇತ್ರ ಇವು ಬಿಡುಗಡೆ ಮಾಡಿ 'ಭಾಷೆ ಓಂದೆ ಭಾವನೆ ಬೇಕು, ಭಾವನೆ ಓಂದೆ ಭಕ್ತಿ ಬೇಕು. ಈ ಓನ್ನಲೆಲಿ ಭಾಷೆನ ಅರ್ಥ ಮಾಡಿಕೊಂಬೊಕು'ತ್ತ ಹೇಳ್ದೊ.

### ವಿಚಾರಗೋಷ್ಠಿ

ಅರೆಭಾಷೆ ಸಾಹಿತ್ಯ ವಿಚಾರಗೊಷ್ಠಿಲಿ ಸ್ವಾತಂತ್ರ್ಯ ಪೂರ್ವಲಿ-ಅರೆಭಾಷೆಯವರ ಸ್ಥಿತಿಗತಿಗಳ ಬಗ್ಗೆ ವಕೀಲರೂ ಮತ್ತೆ ಸಂಶೋಧಕರೂ ಆದ ಶ್ರೀ ವಿದ್ಯಾಧರ ಬಡ್ಡಡ್ಕ ಇವು ವಿಚಾರ ಮಂಡಿಸಿದೊ. ಸ್ವಾತಂತ್ರ್ಯ ನಂತರಲಿ – ಅರೆಭಾಷೆನ ಸಂವಿಧಾನದ 8ನೇ ಪರಿಚ್ಛೇದಕ್ಕೆ ಸೇರ್ಸುವ ವಿಚಾರ ಮತ್ತೆ ಭಾಷಾ ಅಲ್ಪಸಂಖ್ಯಾತ್ಕರ ಮಾನ್ಯತೆ ಬಗ್ಗೆ ಪ್ರಾಧ್ಯಾಪಕರೂ ಮತ್ತೆ ಬರಹಗಾರರೂ ಆದ ಡಾ। ಕರುಣಾಕರ ನಿಡಿಂಜಿ ಇವು ವಿಚಾರ ಮಂಡಿಸಿದೊ.

### ಕಾವ್ಯ ಗಾನ ಕುಂಚ

ಅಪರಾಹ್ನ ನಡ್ದ ಕಾವ್ಯ ಗಾನ ಕುಂಚ ಕಾರ್ಯಕ್ರಮಲಿ ಕೊಟ್ಟಕೇರಿಯನ ಶ್ರೀಮತಿ ಲೀಲಾ ದಯಾನಂದ, ಶ್ರೀ ಬಾಬು ಗೌಡ ಅಚ್ಚಲ್ಪಾಡಿ, ಶ್ರೀಮತಿ ಸಂಗೀತಾ ರವಿರಾಜ್, ಶ್ರೀ ಉದಯ ಭಾಸ್ಕರ್ ಇವು ಕವನ ವಾಚನ ಮಾಡ್ದೊ ಯಶವಂತ ಕುಡೆಕಲ್‌ನವು ಕವನನ ಬರ್ದ್ ಕಳ್ಸಿದ್ದೊ. ಶ್ರೀ ಶಶಿಧರ ಮಾವಿನಕಟ್ಟೆ, ಶ್ರೀಮತಿ ಗಿರಿಜಾ ಎಂ.ವಿ., ಶ್ರೀಮತಿ ಪೂರ್ಣಿಮಾ ಮಡಪ್ಪಾಡಿ, ಶ್ರೀಮತಿ ಮಮತಾ ಪಡ್ಡಂಬೈಲ್, ಶ್ರೀ ಕೆ.ಯನ್. ಪುಂಡರಿಕನವು ಹಾಡ್ ಹಾಡ್ದೊ. ಶ್ರೀ ಪ್ರಸನ್ನ ಐವರ್ನಾಡು, ಶ್ರೀ ವಸಂತ ಕನ್ನಿಕಾಡಿ, ಶ್ರೀ ಪ್ರಣಮ್, ನಂಗಾರು ಶ್ರೀಮತಿ ಸಮೀಕ್ಷಾ ಮತ್ತೆ ಶ್ರೀಮತಿ ಅಭಿಜ್ಞಾ.ಕೆ.ಸಿ ಇವು ಚಿತ್ರ ಬಿಡಿಸಿದೊ.

ಸಾಂಸ್ಕೃತಿಕ ವೈವಿಧ್ಯಲಿ ಅಪರಾಹ್ನ ಅರೆಭಾಷೆ ಪಳಮೆ-ಹಾಸ್ಯ ಲಾಸ್ಯ ಕಾರ್ಯಕ್ರಮ

ನಡ್ತ್

ಹಿಂಬೊತ್ತ್ ಅರೆಭಾಷೆ ಸಾಂಸ್ಕೃತಿಕ ವೈಭವಲಿ ಕಲಾಬಳಗ ಮಡಿಕೇರಿ ಇವು ವೀರ ಚರಿತ್ರೆ ಮತ್ತೆ ಕೊಲ್ಲಮೊಗ್ರ ತಂಡಂದ ಸಿದ್ದವೇಷ ಕಾರ್ಯಕ್ರಮ ನಡ್ತ್.

ಈ ಸಮ್ಮೇಳನಲಿ ಸುಮಾರು ಸಾವಿರದ ಐದುನೂರಕ್ಕೂ ಹೆಚ್ಚ್ ಜನ ಸೇರಿದ್ದೊ. ಎಲ್ಲವ್ಕೂ ಮಧ್ಯಾಹ್ನದ ಊಟದ ವ್ಯವಸ್ಥೆ ಇತ್ತ್.

# ಸಮ್ಮೇಳನದ ಆಶಯ

ಕರ್ನಾಟಕ ರಾಜ್ಯ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಮಡಿಕೇರಿ, ಸ್ವಾಗತ ಸಮಿತಿ, ಅರೆಭಾಷೆ ಸಾಹಿತ್ಯ ಸಮ್ಮೇಳನ ಹಾಗೂ ಗೌಡರ ಯುವ ಸೇವಾ ಸಂಘ (ರಿ.) ಸುಳ್ಯ ಇವರ ಕೂಡ್ ಕೂಟಲಿ, ಇತಿಹಾಸಲೇ ಸುರುನ ಸರ್ತಿ ಒಂದ್ ದೊಡ್ಡ ಮಟ್ಟನ್ ಅರೆಭಾಷೆನ ಸಾಹಿತ್ಯ ಸಮ್ಮೇಳನನ ಸುಳ್ಯದ ಕೊಡಿಯಾಲ್ ಬೈಲ್‌ಲ್ಲಿರುವ ಗೌಡ ಸಮುದಾಯ ಭವನಲಿ 2019ರ ಮಾರ್ಚ್ 2ರ ಶನಿವಾರದಂದ್ ಒಂದು ದಿನ ಪೂರ್ತಿ ಬೇರೇ ಬೇರೆ ಕಾರ್ಯಕ್ರಮಗಳ ನಡ್ಸಿದೊ.

ಈ ಸಮ್ಮೇಳನ ಮಾಡ್ದರೊಟ್ಟಿಗೆ, ಸುಮಾರ್ 400 ವರ್ಷಗಳ್‌ಂದ ಹೆಚ್ಚ್ ಇತಿಹಾಸ ಇರುವ ನಮ್ಮ ಅರೆಭಾಷೆಗೆ ಸಂವಿಧಾನದ 8ನೇ ಭಾಷೆ ಪರಿಚ್ಛೇದಕ್ಕೆ ಸೇರ್ಸೋಕುಂತ, ಅದಲ್ಲದೆ ಅರೆಭಾಷೆ ಮಾತಾಡ್‌ವ ಜನಗಳಿಗೆ ನಮ್ಮ ರಾಜ್ಯಲಿ ಭಾಷಾ ಅಲ್ಪ ಸಂಖ್ಯಾತ ಸ್ಥಾನಮಾನ ಸಿಕ್ಕೊಕೂಂತ ಒತ್ತಾಯ ಮಾಡ್ದು ಕೂಡ ನಮ್ಮ ಉದ್ದೇಶ ಆಗುಟು. ಅಲ್ಲದೆ ಅರೆಭಾಷೆ ಮಾತಾಡ್ವ ಎಲ್ಲಾ ಮಕ್ಕಳಿಗೆ ಮುಂದೆನ ದಿನಗ ವಿದ್ಯೆಗೆ, ಉದ್ಯೋಗಕ್ಕೆ ಮತ್ತೆ ಸರಕಾರಂದ ಸಿಕ್ಕುವ ಬೇರೆಲ್ಲಾ ಸೌಲಭ್ಯಗ ತಕಾಂಕನ ಸಂಬಂಧಪಟ್ಟವರ ಒತ್ತಾಯಪಡಿಸಿ, ಮನವಿ ಕೊಡಿಕಾಗಿ ಈ ಸಮ್ಮೇಳನ.

# ಸಮ್ಮೇಳನ ಅಧ್ಯಕ್ಷ
# ಶ್ರೀ ಕೆ. ಆರ್. ಗಂಗಾಧರ
# ಅವರ ಭಾಷಣ



*ಸನ್ಮಾನ್ಯ ಅರೆಭಾಷಿಕ ಬಂಧುಗಳೇ,*
*ಆತ್ಮೀಯರೇ ಮತ್ತೆ ಆಮಂತ್ರಿಕರೇ,*
*ನೀವ್‌ಗೆಲ್ಲ ಕೈ ಮುಗ್ದ್ ನನ್ನ ಮಾತ್‌ಗಳ ಆರಂಭಿಸಿನೆ.*

ಅರೆಭಾಷೆ ನಮ್ಮ ತಾಲೂಕಿನ ರಾಜಭಾಷೆ. ನಮ್ಮ ಗೌಡ ಜನಾಂಗದ ಮಾತೃಭಾಷೆ. ಒಂದು ಜನಾಂಗಕ್ಕೆಂತ ಒಂದು ಭಾಷೆ ಇದ್ದರೆ ಅದ್ ಅರೆಭಾಷೆಗೆ ಮಾತ್ರ. ಸುಳ್ಯ ತಾಲೂಕ್‌ಲಿ ನಾವು ಅರೆಭಾಷೆ ಮಾತಾಡುವ ಗೌಡ ಜನಾಂಗದವು ಬಹು ಸಂಖ್ಯಾತರಾದ್ದರ್‌ಂದ ನಮ್ಮ ಅರೆಭಾಷೆ ನಮ್ಮ ಜನಾಂಗನ ಮೀರಿ ಸುಳ್ಯಲಿ ಅದ್ ಇಂದ್ ಒಂದು ವ್ಯಾವಹಾರಿಕ ಭಾಷೆ ಆಗಿ ಬೆಳ್ದ್ ನಿಂತುಟು. ಸುಳ್ಯಲಿ ಇಂದ್ ಎಲ್ಲಾ ಜನಾಂಗವು ಭಾರಿ ಪೊರ್ಲುಲಿ ಅರೆಭಾಷೆ ಮಾತಾಡುವೆ.

ಒಂದು ಕಾಲಲಿ ನಮ್ಮಲ್ಲಿ ಅರೆಭಾಷೆ ಮಾತಾಡಿಕೆ ನಾವು ಮುಜುಗರ ಪಡುತ್ತಿದ್ದೋ. ಇಂದ್ ಪರಿಸ್ಥಿತಿ ಬದಲಾಗುಟು. ಇಂದ್ ಭಾರಿ ಅಭಿಮಾನಲಿ ಭಾಷಣ ರೂಪಲಿ ಕೂಡಾ ಅರೆಭಾಷೆ ಬೆಳ್ದ್ ನಿತ್ತುಟು.

ಕಾರಣ ಮುಖ್ಯವಾಗಿ ಅರೆಭಾಷೆಗೊಂದು ಎಕಾಡೆಮಿ ಆಗಿ ಸರಕಾರ ಅದ್ಕೆ ಅಧಿಕೃತ ಮಾನ್ಯತೆ ನೀಡಿಟು. ಇದಕ್ಕೆ ಮೀರಿ ಅರೆಭಾಷಿಗರ ಪೈಕಿ ತುಂಬಾ ಮೇರು ವ್ಯಕ್ತಿತ್ವದ ಜನಗ ಈ ಸಮಾಜಲಿ ರಾಜ್ಯ, ರಾಷ್ಟ್ರ ಮಟ್ಟಲಿ ಹೆಸರ್ ಮಾಡ್ಯೊಳೊ.

'ದೇಶಕ್ಕೊಬ್ಬ ಗಾಂಧೀಜಿ, ಸುಳ್ಯಕ್ಕೊಬ್ಬ ಕೆ.ವಿ.ಜಿ' ಅಂತ ಹೆಸ್ರ್ ಮಾಡ್ದ ಆಧುನಿಕ ಸುಳ್ಯದ ನಿರ್ಮಾತಾ ಕುರುಂಜಿ ವೆಂಕಟ್ರಮಣ ಗೌಡ್ರ್ ಅರೆಭಾಷೆವು.

ಕರ್ನಾಟಕ ರಾಜ್ಯ ಮುಖ್ಯಮಂತ್ರಿ ಆಗಿ, ಪ್ರಸ್ತುತ ಕೇಂದ್ರ ಸರಕಾರಲಿ ಮಂತ್ರಿ ಆಗಿರುವ ನಮ್ಮೂರ್‌ನ ಮಣ್ಣಿನ ಮಂಜ ಆಗಿರುವ ಡಿ.ವಿ. ಸದಾನಂದ ಗೌಡ ಅರೆಭಾಷೆವು. ಕರ್ನಾಟಕ ರಾಜ್ಯ ವಿಧಾನ ಸಭೆನ ಸ್ಪೀಕರ್ ಆಗಿದ್ದ ಕೊಡಗ್‌ನ ಕೊಂಬಾರ್‌ನ ಬೊಪಯ್ಯನವು ಅರೆಭಾಷೆವು. ಕರ್ನಾಟಕ ರಾಜ್ಯದ ಎಡ್ವೋಕೇಟ್ ಜನರಲ್ ಆಗಿದ್ದ ಮಾವಜಿ ಜನಾರ್ಧನ ಗೌಡ್ರ್ ಅರೆಭಾಷೆವು. ಕೊಡಗ್‌ನ ಮೊತ್ತ ಮೊದಲ ಸಂಸದರಾಗಿದ್ದ ನಿಡ್ಯಮಲೆ ಮುದ್ದಪ್ಪನವು ಅರೆಭಾಷೆ ಜನಾಂಗದವು. ಆದಿಚುಂಚನಗಿರಿ ಮಠದ ಶ್ರೀ ಶ್ರೀ ಪ್ರಸನ್ನನಾಥ ಸ್ವಾಮೀಜಿಯವು ಪೂರ್ವಾಶ್ರಮಲಿ ಅರೆಭಾಷೆ ಜನಾಂಗದವು.

ಹಿಂದೆ ಬ್ರಿಟಿಷರ ವಿರುದ್ಧ ಹೋರಾಡಿ ಪ್ರಾಣತ್ಯಾಗ ಮಾಡಿ ಹುತಾತ್ಮರಾದ ಗುಡ್ಡೆಮನೆ ಅಪ್ಪಯ್ಯ ಗೌಡ್ರ್, ಕೆದಂಬಾಡಿ ರಾಮ ಗೌಡ್ರಂತಹ ಧೀರ ನೇತಾರರ್ ಅರೆಭಾಷೆ ಜನಾಂಗದವು. ಸುಳ್ಯ ತಾಲೂಕಿನ ಆದಿಕವಿ ಕೊಳಂಬೆ ಪುಟ್ಟಣ್ಣ ಗೌಡ್ರ್,

ಅವರ ಮಂಜ ನಿವೃತ್ತ ಉಪಕುಲಪತಿ ಡಾ। ಚಿದಾನಂದ ಕೊಳಂಬೆ, "ಇಂಡಿಯ ಟು ಡೇ' ಉಪ ಸಂಪಾದಕ ರಾಜ್ ಚಂಗಪ್ಪ, ಕನ್ನಡ ಭಾಷಾ ತಜ್ಞ ಪ್ರೊ. ಕೋಡಿ ಕುಶಾಲಪ್ಪ ಗೌಡ್ರ್, ಮೂರು ಬಾರಿ ಶಾಸಕರಾದ ಕೂಜುಗೋಡು ವೆಂಕಟ್ರಮಣ ಗೌಡ್ರ್, ಕರ್ನಾಟಕ ರಾಜ್ಯದ ಮಂತ್ರಿ ಆಗಿದ್ದ ದಂಬೆಕೋಡಿ ಚಿನ್ನಪ್ಪನವು, ಲಯನ್ಸ್ ಗವರ್ನರ್ ಆದ ಅಪ್ರತಿಮ ವಾಗ್ಮಿ ಎಂ.ಬಿ. ಸದಾಶಿವನವು, ಕರ್ನಾಟಕ ಸರಕಾರದ ಕಾನೂನು ಕಾರ್ಯದರ್ಶಿ ಆಗಿದ್ದ ಕೆ.ಆರ್. ಚಾಮಯ್ಯನವು, ಶಾಸಕಾಂಗ ಕಾರ್ಯದರ್ಶಿ ಆಗಿದ್ದ ಓಂ ಪ್ರಕಾಶ್ ಪಿಂಡಿಮನೆ, ಡಿಲ್ಲಿಲಿ ಜವಹರಲಾಲ್ ನೆಹರು ವಿಶ್ವವಿದ್ಯಾಲಯಲಿ ಕನ್ನಡ ಪೀಠದ ಮುಖ್ಯಸ್ಥ ಡಾ। ಬಿಳಿಮಲೆ ಪುರುಷೋತ್ತಮನವು, ಅಮೇರಿಕಾದ ಓಹಿಯೋ ವಿಶ್ವವಿದ್ಯಾನಿಲಯಲಿ ಕಂಪ್ಯೂಟರ್ ವಿಜ್ಞಾನಿ ಆಗಿ ಪ್ರೊಫೆಸರ್ ಆಗಿರುವ ಗುಡ್ಡೆಮನೆ ರಾಘವ ಗೌಡ್ರ್, ರಂಗಾಯಣ ನಟಿ ಗೀತಾ ಮೋಂಟಡ್ಕ – ಇನ್ನೂ ನೂರಾರ್ ಮೇರು ವ್ಯಕ್ತಿಗ ಅರೆಭಾಷೆ ಜನಾಂಗಂದ ಪೊರಪೊಮ್ಮಿ ಜನಾಂಗಕ್ಕೆ ಕೀರ್ತಿ ತಂದೊಳೊ. ಇವರ್‌ಂದಾಗಿ ನಾವು ಇಂದ್ ಅರೆಭಾಷೆವುಂತ ಹೇಳ್‌ಕಂಬಕೆ ಹೆಮ್ಮೆ ಪಟ್ಟ್‌ಕಂಡೊಳೊ. ಅರೆಭಾಷೆಗೂ ಒಂದು ಘನತೆ ಬಂದುಟು.

ಅರೆಭಾಷೆನ ಒಟ್ಟಿಗೆ ಒಂದು ಸಂಸ್ಕೃತಿ ಕೂಡಾ ಬೆಸೆದುಹೋವುಟು. ಆ ಸಂಸ್ಕೃತಿಂದಾಗಿ ಭಾಷೆ ಬೆಳಿಯೊದು. ನಮ್ಮಲ್ಲಿ ಅರೆಭಾಷೆ ಸಂಸ್ಕೃತಿಂತ ಹೇಳ್ರೆ ಅದ್ ಇಲ್ಲಿನ ಗೌಡ ಜನಾಂಗದ ಸಂಸ್ಕೃತಿಂತಾ ಹೆಳ್ರೆ ತಪ್ಪಾಕಿಲೆ. ಇಲ್ಲಿ ಅರೆಭಾಷೆ ಮತ್ತು ಗೌಡ ಜನಾಂಗದ ಸಂಸ್ಕೃತಿ ಒಟ್ಟೊಟ್ಟಿಗೆ ಬೆಳೆಯುತ್ತಾ ಉಟ್ಟು. ಇದರ ಬೇರೆ ಬೇರೆಂತ ಹೇಳಿಕೆ ಸಾಧ್ಯ ಇಲ್ಲೆ. ಆದರ್‌ಂದ ಸರಕಾರ ಕೂಡಾ ಯೋಚನೆ ಮಾಡಿ ನಮ್ಮ ಏಕಾಡೆಮಿಗೆ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಏಕಾಡೆಮಿಂತ ಹೆಸರಿಸಿಟು.

ಅರೆಭಾಷೆ ಏಕಾಡೆಮಿ ಸ್ಥಾಪನೆಗೆ ಕಾರಣಕರ್ತರ್ ಮುಖ್ಯವಾಗಿ ನಮ್ಮ ಅಂದ್‌ನ ಕರ್ನಾಟಕ ರಾಜ್ಯ ಮುಖ್ಯಮಂತ್ರಿಗಳಾದ ನಮ್ಮವೇ ಆದ ಶ್ರೀ ಡಿ.ವಿ ಸದಾನಂದನವು. ಜೊತೆಗೆ ಅಂದ್‌ನ ವಿಧಾನ ಸಭೆ ಸಭಾಪತಿಗಳಾಗಿದ್ದ ಕೊಂಬಾರನ ಬೋಪಯ್ಯನವು ಅಲ್ಲದೆ ಆದೇಶ ಪೊರ್ಡ್‌ಸಿಕೆ ಸಹಕರಿಸಿದ ಅಂದ್‌ನ ಕನ್ನಡ ಮತ್ತೆ ಸಂಸ್ಕೃತಿ ಇಲಾಖೆನ ಮಂತ್ರಿಗಳಾದ ಗೋವಿಂದ ಕಾರಜೋಳನವು. ಇವರೆಲ್ಲರ್ನ, ನಿಮ್ಮೆಲ್ಲರ ಪರವಾಗಿ ನಾ ಈ ಪ್ರಪ್ರಥಮ ಅರೆಭಾಷೆ ಸಾಹಿತ್ಯ ಸಮ್ಮೇಳನಲಿ ಕೃತಜ್ಞತಾ ಪೂರ್ವಕವಾಗಿ ನೆನ್ಸಿಕಣೆ.

ಇದರ ಓನ್ನೆಲೆಲಿ ಹಂತ ಹಂತಲಿ ಶ್ರಮಿಸಿದ ಚಂದ್ರಾ ಕೋಲ್ಚಾರ್, ರಾಜೇಶ್ ತೇನನ, ಅಮ್ಮೈ ಶಿವರಾಯ, ಜ್ಞಾನೇಶ್ ನಿಡ್ಯಮಲೆ, ಪದ್ಮಾ ಕೋಲ್ಚಾರ್, ಕೆ.ವಿ ಹೇಮನಾಥ್, ನಾರಾಯಣ ಕೆ.ಸಿ., ಕೆ.ಸಿ. ಸದಾನಂದ, ರವೀಂದ್ರನಾಥ ಕೇವಳ, ನಂಗಾರ್ ನಾಣಯ್ಯ, ಅನಂತರಾಜ್ ಪುತ್ತೂರು, ನಂಗಾರ್ ನಿಂಗರಾಜು, ಕೆ. ಆರ್. ಗಂಗಾಧರ, ಅಮ್ಮೈ ಫಾಲಾಕ್ಷರವರ ನಿರಂತರ ಶ್ರಮನ ಕೂಡಾ ನಾ ಇಲ್ಲಿ ನೆನ್ಸಿಕಣೆ.

ಆರಂಭಲಿ ಏಕಾಡೆಮಿನ ಮೊತ್ತ ಮೊದಲ ಅಧ್ಯಕ್ಷ ಎನ್.ಎಸ್. ದೇವಿಪ್ರಸಾದ್ ನವ್ಕೆ ಸರಕಾರದ ಬದಲಾವಣೆಂದಾಗಿ ಅಷ್ಟ್ ಅವಕಾಶ ಸಿಗದರ್‌ಂದ ಸೀಮಿತ ಕಾರ್ಯಕ್ರಮಗಳ ಮಾತ್ರ ಮಾಡಿಕೆ ಸಾಧ್ಯ ಆದರೂ ಏಕಾಡೆಮಿಗೆ ಒಂದು ಭದ್ರ

ಬುನಾದಿ ಹಾಕಿಕೊಟ್ಟೊಳೊ.

ನಂತರ ಎರಡನೇ ಅಧ್ಯಕ್ಷರಾದ ಕೊಲ್ಯದ ಗಿರೀಶ್‌ನವು ಸುಳ್ಯ, ಪುತ್ತೂರು, ಮಡಿಕೇರಿಗಳಲ್ಲಿ ಅಲ್ಲದೆ ಮಂಗ್ಳೂರು, ಮೈಸೂರು, ಬೆಂಗ್ಳೂರು ಹಾಂಗೆ ದೂರದ ರಾಷ್ಟ್ರರಾಜಧಾನಿ ಡಿಲ್ಲಿಲಿ ಕೂಡಾ ಯಶಸ್ವಿ ಕಾರ್ಯಕ್ರಮಗಳ ಸಂಘಟಿಸಿ ಸೈ ಎನಿಕೊಂಡದರ ನಾ ಇಲ್ಲಿ ಅಭಿನಂದ ಪೂರ್ವಕವಾಗಿ ದಾಖಲಿಸಿನೆ.

ಮುಂದೆ ನನ್ನ ಮಾತ್‌ಗಳ **ಅರೆಭಾಷೆ, ಅರೆಭಾಷೆ ಸಾಹಿತ್ಯ, ಸಂಸ್ಕೃತಿ, ವೈಚಾರಿಕತೆ ಮತ್ತೆ ನಮ್ಮ ಒತ್ತಾಸೆಗ** ಓಂಗೆ ಐದ್ ಭಾಗ ಮಾಡಿ ಮುಂದುವರ್‍ಸಿನೆ.

ದಕ್ಷಿಣ ಕನ್ನಡದ ಸುಳ್ಯ, ಮತ್ತೆ ಅದರ ಸುತ್ತಮುತ್ತಲ ಹಾಂಗೂ ಕೊಡಗ್‌ನ ಗೌಡ್ರ್‌ಗ ಮಾತಾಡುವ "ಅರೆಭಾಷೆ" ಗೌಡ ಜನಾಂಗದ ವಿಶಿಷ್ಠ ಭಾಷೆಯಾಗಿ ಉಳ್ದುಟು. ಈ ಅರೆಭಾಷೆನೇ ಭಾಷಾ ಪರಂಪರೆಲಿ ಉಳ್ದು, ಬೆಳ್ದ್ ಬಂದ ಗೌಡ ಜನಾಂಗದ ಅಮೂಲ್ಯ ಸೊತ್ತು. ಕನ್ನಡ ಭಾಷೆನ ಮೂಲ ವೈಭವ ಮತ್ತ್ ಸಂಪನ್ನತೆನ ಮೈಗೂಡ್ಸಿಕಂಡ್ ಈ ಭಾಷೆ ಬೆಳ್ದುಟು ಎಂಬುದರ ಸೂಕ್ಷ್ಮವಾಗಿ ಗಮನಿಸೊಕಾದೆ. ಈ ಅರೆಭಾಷೆಲಿ ಪ್ರಾದೇಶಿಕ ವೈವಿಧ್ಯತೆನ ಒಟ್ಟಿಗೆ ಅರೆಭಾಷಿಕ ಜನಾಂಗದವರ ಅನುಭವ, ಬುದ್ಧಿ, ವಿಚಾರಗಳ ಅಭಿವ್ಯಕ್ತಿಸುವ ಶಬ್ದ ಸಂಪತ್, ವ್ಯಾಕರಣ, ಗಾದೆ, ಒಗಟು, ನುಡಿಗಟ್ಟ್, ಪಳ್ಮೆ, ಕಥೆಗ ಸಾಕಷ್ಟು ಒಳೊ.

ಬಿ.ಎಂ ಶ್ರೀಯವರ "ಕನ್ನಡ ತಾಯ್ ನೋಟ" ಎಂಬ ಕೃತಿಲಿ 'ಕಲ್ಲು ಹೂವಿಡಿದರೆಯ ಮೇಲೆ' ಎಂಬ ಶಬ್ದ ಪ್ರಯೋಗ ಬಂದದೆ. ಇಲ್ಲಿ "ಅರೆ" ಎಂದರೆ ಬಂಡೆ ಎಂಬ ಅರ್ಥ ಬಂದದೆ. ಆದರ್‌ಂದ ಅರೆಭಾಷೆಂತ ಕರಿಯಕನ 'ಬಂಡೆಯಾಂಗೆ ಅಚಲ' ಇತರ ಪ್ರಭಾವಿ ಭಾಷೆಗಳ ಸಂಪರ್ಕ ಒತ್ತಡಗಳ ಮಧ್ಯೆ ಬದಲಾಗದೆ ಸ್ಥಿರವಾಗಿ ಒಳ್ದ ಭಾಷೆ ಎಂಬ ಅರ್ಥ ಬಂದದೆ. ಭಾಷೆಂತ ಹೇಳ್‌ರೆ ಒಂದು ಪರಿಪೂರ್ಣ ವಿಚಾರ ಆದರ್‌ಂದ ಅರೆಭಾಷೆಂತೆಳ್‌ರೆ ಅರ್ಧಭಾಷೆ, ಚಪ್ಪಡಿ ಭಾಷೆ ಎಂಬ ಅನರ್ಥಕ್ಕೆ ಇಲ್ಲಿ ಆಸ್ಪದನೆ ಇಲ್ಲೆ. ಓಂಗೆ ಗಟ್ಟಿಯಾಗಿ ಹೇಳ್ದವು ಭಾಷಾ ತಜ್ಞೆ ಶ್ರೀಮತಿ ನಂಗಾರ್ ಲಲಿತನವು.

**ಅರೆಭಾಷೆನ ಗ್ರಾಮೀಣ ಸೊಗಡ್**:- ನಮ್ಮೂರ್‌ನ ಭಾಷೆ ಆದ ಅರೆಭಾಷೆ ನಮ್ಮೂರ್‌ನ ಪರಿಸರಕ್ಕೆ ಭಾರಿ ಸೋಕ್ ಹೊಂದಿಕಂಡದೆ. ನಮ್ಮೂರ್‌ನ ಕಾಡ್ ಪ್ರಾಣಿಗ ಆದ ಹೊಳಿಕೆ, ಅಣ್‌ಕ್, ಉರಿಯೋಳು, ಕುಂಡತ, ಬರ್ಕ್ಯ, ಚಣಿಲ್, ನಮ್ಮ ಹಳ್ಳಲಿರುವ ಬೇರೆ ಬೇರೆ ಜಾತಿನ ಮೀನ್‌ಗ- ಮಡೆಂಜಿ, ಕೊಲ್ರು ಕರಿಮೀನ್, ಕೀಜಣ್,, ಕಾಜೊವು, ಮುಳ್ಳ, ಕಲ್ಲುಮುಳ್ಳ, ಬಾಳೆ, ಮೂಡು, ಅರೆಂಜ ಇತ್ಯಾದಿ., ಬಹುಪಯೋಗಿ ಮರಗ ಆದ ಬೆಳ್‌ದಿರಿ, ಹೊನ್ನೆ, ಮೊತ್ತಿ, ಮರ್ವ, ಪುಣಿಲ್; ಕಾಡ್ ಹಣ್ಣ್‌ಗಾದ - ಗೊಟ್ಟೆ, ಮುಳ್ಕರ, ಚೂರಿ, ಸರಳಿ, ಗುಮ್ಮಟೆ, ಇತ್ಯಾದಿ; ಕೃಷಿ ತಾಂತ್ರಿಕ ಕೌಶಲ್ಯಗ- ಮೆಂಟೆ, ನೀರ್‌ಮೆಂಟೆ, ಸಿಡಿ, ಅಡ್ಡಿಲ್; ದೇಸಿ ತಿಂಡಿಗ- ಪುಂಡಿ, ಅಬ್ಲುಕ, ಪತ್ರೋಡೆ, ಚಂಗುಳಿ, ಮುಳ್ಕ ಅಂಬುಲಿ, ಮೂಡೆ ಓಟ್ಟ್, ಅಡ್ಗೆ ಕೋಣೆಲಿ ಬಳ್ಸುವ ವಸ್ತುಗಳಾದ- ನೆಲು, ಚಿಬುಳಿ, ಮರ್ಚಟೆ, ಕುಡ್ಪು, ಅಳಗೆ ಚಟ್ಟೆ, ತಡ್ಪೆ, ಮರ್ಗಿಲ್; ಕೃಷಿ ಉಪಕರಣಗ-

ಚುಡೊಂಕು, ಕಡ್ಪತ್ತಿ, ಮುಳ್ಳು ಕತ್ತಿ, ಕೈ ಕೊಡಲಿ, ದಳೆ, ಗಳೆ ಇತ್ಯಾದಿ ಶಬ್ದಗಳ ಅರೆಭಾಷೆಲಿ ತುಂಬಾ ಸೂಕ್ತ ಆಗಿ ಬಳ್ಸಿಕೊಂಡೊಳೊ.

ಹಾಸ್ಯಕ್ಕೆ ಕೂಡಾ ಸಾಕಷ್ಟ್ ಅರೆಭಾಷೆ ಶಬ್ದಗ ಬಾರಿ ಸೂಕ್ತ ಆಗಿ ನೆಗೆ ಹುಟ್ಟಿಸಿದೆ, ಅಮುರ್ಸು, ಉಳ್ಳುಕಿಣಿ, ಕಣ್ಣೋಜಿ, ಕೊಟ್ಟಾಯ್ ಕಟ್ಟ್, ಕೊಸರಂಕೊಳ್ಳಿ, ಕೊರ್ಸಂಡಿ, ಚಡಾಯ್ಸ್, ಓಂಗುದು, ಚೊರೆ ಕರ್ಣಕುತ್ತ, ಚೋಕುಳು ಹಾಕುದು, ತಕ್ಕಡ್ಜಿ, ಪತ್ತಂಡೆ ಮುಂತಾದ ಶಬ್ದಗಳ ಅರೆಭಾಷೆಲಿ ಭಾರಿ ಸೋಕು ಬಳ್ಸಿಕಂಬಕಾದೆ.

ಹರಿಯಕಿಲೆ, ಕೈಂಪೆ, ಕೈಂತುಟು, ಅದುರ್ದು ಒಗ್ಗರಣೆಹಾಕ್, ಗಾಳಿಹಾಕ್, ಮುಲ್ಲೆ ಕತ್ರುಸು ಮೊದಲಾದ ಎರಡೆರಡ್ ಅರ್ಥಕೊಡುವ ಶಬ್ದಗ ಕೂಡಾ ಅರೆಭಾಷೆಲಿ ಹೇರಳವಾಗಿ ಉಟ್ಟು. ಪೊಡುಂಬ, ಪೊದುಂಕುಳು, ಅಡಿಮುಂಗ, ಎರುಮ್ಮೈಂದ, ಚಪ್ಪಾಂಗಿ, ಹೊಗ್ಗುಲಿ, ಮಾರಾಪು, ಪಕೋರ್ಳಿ ಮುಂತಾದ ನಾಮ ವಿಶೇಷಣಗಳ ಕೂಡಾ ಅರೆಭಾಷೆಲಿ ಕಾಣಕ್. ಚುರ್ಕರ, ಪೊನ್ನಂಬರ, ಘೋಂತುದು, ಮುರ್ಕಪ್ಪ ಓಡಿ, ನಿಮುರ್ದು, ರೈಸುದು ಮುಂತಾದ ಕ್ರಿಯಾ ವಿಶೇಷಣ ಶಬ್ದಗಳನೂ ನಾವು ಅರೆಭಾಷೆಲಿ ಕಾಣಕ್.

ಕೆಲವು ಅಪ್ಪಟ ಅರೆಭಾಷೆ ಶಬ್ದಗ ಒಳೊ–ಹುಗ್ಗೆ, ಆಂಬರ, ನೊರ್ಗುಳಿ, ಅಂಡಾಟೆ, ಕೊತ್ತೊಳಿಕೆ, ಕೂಂಟೆಗೆ, ಕೂಂಜೋಳು, ಕಿಡಿಂಜೋಳು, ಅಂರ್ಬೆಲ್, ಗಿಡ್ಪ, ಅರ್ಕಿಲ್ ಮಾಡ್‌ಕೋಳ್, ಪೊಳಿಮಣೆ, ಉರ್ಟಿ, ಇರ್ದರ, ಗುನ್ನ, ಕೆಬಿಚಂಡೆ, ಆರ್ಭಾಯ್, ಗೌಲಿಕಂಡ್, ಒಡ್ಜಿಲ್ ತೊಂಬರ, ದೋಗಣೆ, ನಂಜಿಕಂಬುದು– ಇವೆಲ್ಲಾ ಅಪ್ಪಟ ಅರೆಭಾಷೆ ಶಬ್ದಗ ಅರೆಭಾಷೆನ ಅನನ್ಯತೆನ ಉಳ್ಸಿಕಂಡುಟು.

ಇನ್ನೂ ಅರೆಭಾಷೆಲಿ ಈಗನ ಕಾಲಕ್ಕೆ ಅನ್ವಯ ಆಗುವ ಸಾಕಷ್ಟ್ ಗಾದೆಗ ಒಳೊ. ಆಕಾನಕ್ಕಾದ ಈ ಕುರೆ, ಈ ಕುರೆಗಾದ ಆಕಾನ; ಎಲ್ಲವು ಕಾಯಿ ಹೆರಿಯಕನ ನಾವು ಚೆಪ್ಪಿನಾರು ಹೆರಿಯಕಲ್ಲಾ, ತೌಡುತಿಂಬವ ಹೋದರೆ ಉಮಿ ತಿಂಬವ ಬಾತ್; ಹಾಂಗೆ ನುಡಿಗಟ್ಟ್‌ಗ - ಅಂವ ಪೊಲ್‌ಜಿ ಇಲ್ಲದಂವ, ಅರ್ದ್ ಕುಡ್ದುಟು, ಉಂಡೆ ಇಸುದು, ಎದೆಬೊಗ್ಗದ ಜಾತಿ, ಕುಂಡೆಗೆ ಚವುಳಿ ಕಚ್ಚಿದಾಂಗೆ ಅವನ ಜೋಬು ಯಾಗೋಳು ಒಟ್ಟೆ, ಹರ್ಕ್‌ಬಾಯಿ, ಬೇಜಾರಾವಷ್ಟ್ ಒಳ್ಳೆ ಮೊನ್ನ.

ಇಂತಹ ಸಾವಿರಾರ್ ಅಪ್ಪಟ ಅರೆಭಾಷೆ ಶಬ್ದಗ, ಗಾದೆಗ, ನುಡಿಗಟ್ಟ್‌ಗ ನಮ್ಮ ಭಾಷೆಲಿ ಇದ್ದ್ ಇದರ ಬಗ್ಗೆ ಇನ್ನೂ ಹೆಚ್ಚಿನ ಸಂಶೋಧನೆ ನಡಿಯಕಾದೆ. ಇಂತ ಪೊರ್ಲುನ ಭಾಷೆನ ಬುಟ್ಟು ನಮ್ಮ 'ಅವ್ವ, ಅಪ್ಪ'ಂತ ಕರಿವ ಭಾಷೆನ ಬುಟ್ಟು ಮಮ್ಮಿ, ಡ್ಯಾಡಿಂತ ಕರಿವ ಭಾಷೆಗೆ ಮಾರ್ ಹೋಗ್ತಾ ಇರ್‌ದು ಒಂದು ರೀತಿ ದುರಂತನೇ ಸರಿ.– ವ್ಯಾವಹಾರಿಕವಾಗಿ ಹತ್ತಾರ್ ಭಾಷೆನ ಕಲಿಯೋಮೊ. ಆದರೆ ನಮ್ಮ ಅರೆಭಾಷಿಕರ ಮನೆ ಒಳಗೆ ಮತ್ತೆ ಕಾರ್ಯಕ್ರಮಗಳ್‌ಲಿ ಅರೆಭಾಷೆನೇ ಇರ್‌ಲಿಂತ ನನ್ನ ಆಶಯ.

**ಅರೆಭಾಷೆ ಸಾಹಿತ್ಯ** ಕ್ಷೇತ್ರಕ್ಕೆ ಬಂದರೆ ಸಾಹಿತಿ, ಭಾಷಾತಜ್ಞ, ರಾಜ್ಯೋತ್ಸವ ಪ್ರಶಸ್ತಿ ವಿಜೇತ ಪ್ರೊ ಕೋಡಿ ಕುಶಾಲಪ್ಪ ಗೌಡ್ರ ಕೊಡುಗೆ ಅಪಾರನೂ ಮಹತ್ವರವಾಗಿಯೂ ಉಟ್ಟು.

1970 ರ್‌ಲೇ ಕೋಡಿಯವು 'ಗೌಡ ಕನ್ನಡ'ದ ಬಗ್ಗೆ (ಈಗನ ಅಧಿಕೃತ ಅರೆಭಾಷೆ) ಇಂಗ್ಲಿಷ್‌ಲಿ ಸಂಶೋಧನಾ ಗ್ರಂಥ ರಚಿಸಿ, ಅಣ್ಣಾ ಮಲೈ ವಿಶ್ವವಿದ್ಯಾಲಯಕ್ಕೆ ಮಂಡಿಸಿ ಡಾಕ್ಟರೇಟ್ ಪದವಿ ಪಡ್ಕಂಡವು. ಅರೆಭಾಷೆನ ವಿದೇಶಿ ಭಾಷಾ ತಜ್ಞರಿಗೆ ಕೂಡಾ ಮನದಟ್ಟ್ ಮಾಡಿಕೊಟ್ಟವು.

ಅವು ಬರ್ದ- 'ಉರೊಸಗೆ' 'ಬೆಟ್ಟದಾ ಮೇಲೊಂದು ಮನೆಯ ಮಾಡಿ' 'ಕಮಲ ನಿಮಿಲನ' ಇವು ಕನ್ನಡಲಿ ಇದ್ದರೂ ನಮ್ಮ ಅರೆಭಾಷೆ ಸಂಸ್ಕೃತಿ, ಜನಜೀವನದ ಸಾಕಷ್ಟು ಚಿತ್ರಣ ಕೊಟ್ಟೊಳೊ.

2014ರ್ಲಿ ಅವು ಬರ್ದ 'ಮಾನಸ ಮಹಾಭಾರತ' ಮಕ್ಕಳಿಗೆ ಕತೆ ಹೇಳುವ ಶೈಲಿಲಿ ಅತ್ಯಂತ ಸರಳವಾಗಿ ಈ ಮಹಾಕಾವ್ಯನ ರಚಿಸಿ ಅರೆಭಾಷೆ ಸಾಹಿತ್ಯಕ್ಕೆ ಒಂದುಗಟ್ಟಿ ಕೊಡುಗೆ ಕೊಟ್ಟೊಳೊ. ಈ ಇಳಿ ವಯಸ್ಸ್‌ಲಿ ಕೂಡಾ ಅರೆಭಾಷೆ ಲಿಪಿ ಮತ್ತೆ ವ್ಯಾಕರಣದ ಬಗ್ಗೆ ಕೆಲ್ಸ ಮಾಡ್ತಾ ಒಳೊ. ನಿಮ್ಮೆಲ್ಲರ ಪರವಾಗಿ ಅವ್ಕೆ ನನ್ನ ಎದೆ ತುಂಬಿದ ಕೃತಜ್ಞತೆ ಸಲ್ಲಿಸಿನೆ.

• ಮುಂದೆ- ಅರೆಭಾಷೆ ಜನಾಂಗದ ಪ್ರಮುಖ ಧಾರ್ಮಿಕ ನಂಬುಗೆ ಮತ್ತೆ ಆರಾಧನೆ ಆದ ಭೂತಾರಾಧನೆ ಬಗ್ಗೆ ಡಾ। ಚಿನ್ನಪ್ಪ ಗೌಡ್ರ್ ಬರ್ದ ಸಂಶೋಧನಾ ಕೃತಿ "ಭೂತಾರಾಧನೆ ಮತ್ತೆ ಜಾನಪದೀಯ ಅಧ್ಯಯನ', 'ಜಾಲಾಟ', 'ಸಂಸ್ಕೃತಿ ಸಿರಿ' ಹಾಂಗೂ ಡಾ। ಪುರುಷೋತ್ತಮ ಬಿಳಿಮಲೆವು ಬರ್ದ 'ಸುಳ್ಯ ಪರಿಸರದ ಗೌಡ ಜನಾಂಗ - ಒಂದು ಸಾಂಸ್ಕೃತಿಕ ಅಧ್ಯಯನ 'ಕರಾವಳಿ ಜಾನಪದ' ಎಂಬ ಸಂಶೋಧನಾ ಕೃತಿ ಅಲ್ಲದೆ ಡಾ। ಪೂವಪ್ಪ ಕಣಿಯೂರು ರಚಿಸಿದ ಸಂಶೋಧನಾ ಕೃತಿ 'ಉಲ್ಲಾಕುಳು- ಐತಿಹಾಸಿಕತೆ. ಪ್ರಾದೇಶಿಕತೆ, ಆರಾಧನಾ ಸ್ವರೂಪ' 'ಪೂಕರೆ ಮತ್ತ್ ಜಾನಪದಿಯ ಲೇಖನಗಳು', 'ನಾಗರಮಡಿಕೆ', ಎ.ಕೆ. ಹಿಮಕರನವು ಬರ್ದ 'ಜನಮನ ಕಂದ್ರಪ್ಪಾಡಿ' ಮನೋಹರ ದೇವಸ್ಯ ಸಂಪಾದಿಸಿದ- ಗೌಡ ಜನಾಂಗ ಐತಿಹಾಸಿಕ ಅವಲೋಕನ' ಡಿ.ಜಿ. ನಡ್ಕರ್ ಮತ್ತೆ ಪರ್ಲ ಆನಂದ ಗೌಡ್ರ್ ಬರ್ದ ಅನೇಕ ಜನಪದೀಯ ಮತ್ತೆ ಸಂಶೋಧನಾ ಲೇಖನಗಳ್‌ಲಿ ಅರೆಭಾಷಿಗರ, ಮುಖ್ಯವಾಗಿ ಅರೆಭಾಷೆ ಮಾತಾಡುವ ಗೌಡ ಜನಾಂಗದ ಸಂಸ್ಕೃತಿ, ಆಚಾರ, ವಿಚಾರ, ಆಚರಣೆ, ಸಂಪ್ರದಾಯ, ಆರಾಧನಾ ಪದ್ಧತಿಗಳ ವಿಶ್ಲೇಷಣೆ ಮಾಡ್ಯೊಳೊ.

• ಶ್ರೀಮತಿ ನಂಗಾರ್ ಲಲಿತನವು ೮೦ರ ದಶಕಂದಲೇ ಅರೆಭಾಷೆನ ಬಗ್ಗೆ ಕೆಲವು ಸಂಶೋಧನಾತ್ಮಕ ಲೇಖನಗಳ ಬರ್ದದರ್‌ನ ನಾ ನೆನ್ಪು ಮಾಡಿಕಣೆ.

• 2003ರ್ಲಿ ಡಾ। ಚಿನ್ನಪ್ಪ ಗೌಡ್ರ್ ಸಂಪಾದಿಸಿದ 'ಗೌಡ ಜನಾಂಗದ ಇತಿಹಾಸ ಮತ್ತೆ ಸಂಸ್ಕೃತಿ' ಕೃತಿಲಿ ಅರೆಭಾಷೆ ಸಾಹಿತ್ಯ ಮತ್ತೆ ಅರೆಭಾಷೆ ಮಾತಾಡುವ ಗೌಡ ಜನಾಂಗದ ಜನ ಜೀವನದ ಅನನ್ಯತೆನ ಅತ್ಯಂತ ಅಚ್ಚುಕಟ್ಟಾಗಿ, ಕರಾರುವಕ್ಕಾಗಿ (authoritative) ವಿವರಣೆ ನಿಡ್ಯೊಳೊ. ಇಲ್ಲಿ ಅವು ಒಂದು ಮಾತ್ ಹೇಳ್ಯೊಳೊ 'ಸಾಹಿತ್ಯನ ಜಾತಿ ನೆಲೆಲಿ ಮೌಲ್ಯಮಾಪನ ಮಾಡದೆ, ಜನಾಂಗೀಯ ಸಂಸ್ಕೃತಿ ಸಾಹಿತ್ಯನ ರೂಪಿಸುವ ಪ್ರಭಾವಿಸುವ ಪ್ರೇರಕ ಶಕ್ತಿಗಳಾಗಿ ಹೇಂಗೆ ಕೆಲ್ಸ ಮಾಡುವೆ ಎಂಬುದರ

ಭಾರಿ ಸ್ಪಷ್ಟವಾಗಿ ನಿರೂಪಿಸೊಳೊ. ಸಂಸ್ಕೃತಿ ಭಾಷೆನ ಹೇಂಗೆ ರೂಪಿಸಿದೆ ಮತ್ತೆ ಬೆಳ್ಸಿದೆ ಎಂಬುದಕ್ಕೆ ಸಾಕಷ್ಟು ನಿದರ್ಶನ ಕೊಟ್ಟೊಳೊ. ಈ ಕೃತಿಲಿ ಬರುವ ಎಲ್ಲಾ ಲೇಖನಗಳ್‌ಗೆ ಸಂಸ್ಕೃತಿ ಮತ್ತೆ ಜನಪದ ಸಂಶೋಧನೆಲಿ ವಿಶಿಷ್ಠ ಸ್ಥಾನ ಉಟ್ಟು.

1985ರ್ಲಿ ಬೆಂಗ್ಳೂರ್‌ನ ದ.ಕ. ಮತ್ತೆ ಕೊಡಗು ಸಮಾಜದವು ಹೊರತಂದ, ಡಾ। ಕಾಯರ್‌ಮಾರ್ ವೀರಪ್ಪ ಗೌಡ್ರ್ ಸಂಪಾದಿಸಿದ ಸ್ಮರಣ ಸಂಚಿಕೆ 'ಗೌಡ ದೊನಿ' 1996 ರ್ಲಿ ಡಾ। ರೇಣುಕಾಪ್ರಸಾದ್‌ನವು ಸಂಪಾದಿಸಿದ ಗೌಡ ಸಮ್ಮೇಳನದ ಸ್ಮರಣ ಸಂಚಿಕೆ 'ವೀಳ್ಯ'; 2002ರ್ಲಿ ಡಾ। ಪಾಲ್ತಾಡ್ ರಾಮಕೃಷ್ಣ ಆಚಾರ್‌ರವರ ಸಂಪಾದಕತ್ವಲಿ ಸುಳ್ಯದ ಜನಪದ ಕೂಡುಗಟ್ಟ್‌ನವು ಪ್ರಕಟಿಸಿದ 'ಆಟಿ'; 2006ರ್ಲಿ ಆಶಾ ಪೂವಯ್ಯನವು ಸಂಪಾದಿಸಿದ 'ಕಾಸ್ತಾಳಿ'; 2010ರ್ಲಿ ಶ್ರೀಮತಿ ಜಾನಕಿ ಬೆಳ್ಯಪ್ಪನವು ಸಂಪಾದಿಸಿದ 'ಹಸೆಮಣೆ, ಮತ್ತೆ ಅವೇ ಹೊರತಂದ 'ಬೇರ್‌ಲಿ ಚಿಗ್‌ರ್' 2014ರ್ಲಿ ಪುತ್ತೂರು ತಾಲೂಕು ಗೌಡ ಸಮುದಾಯದವು ಪ್ರಕಟಿಸಿದ ಸಾಂಸ್ಕೃತಿಕ ಕೈಪಿಡಿ 'ಒಕ್ಕೂರಲು'; 2014ರ್ಲಿ ಬರೆಮೇಲು ದೊಡ್ಡಣ್ಣ ನವರ ಸಂಪಾದಕತ್ವಲಿ, ಸುಳ್ಯ ತಾಲೂಕು ಗೌಡರ ಯುವ ಸೇವಾ ಸಂಘದವು ಹೊರತಂದ 'ಗೌಡರ ಸಂಸ್ಕೃತಿ ಸಿರಿ'

ಈ ಎಲ್ಲಾ ಕೃತಿಗಳ್‌ಲಿ ಅರೆಭಾಷೆ ಮಾತ್ನಾಡುವ ಗೌಡ ಜನಾಂಗದ ಆಚಾರ, ವಿಚಾರ, ಸಂಸ್ಕಾರ, ಸಂಪ್ರದಾಯ ಮತ್ತೆ ಆಚರಣೆಗಳ ಬಗ್ಗೆ ತುಂಬಾ ತುಂಬಾ ಮಾಹಿತಿ ಕೊಟ್ಟೊಳೊ. ಎಲ್ಲಾ ಆಚರಣೆಗಳ್‌ಲಿ ಒಂದು ರೀತಿನ ಏಕರೂಪತೆ ಬರೊಕು ಎಂಬುದು ಇವರೆಲ್ಲರ ಆಶಯ ಮತ್ತೆ ಉದ್ದೇಶ.

**ಕವನ ಸಂಕಲನ:** ವಿಭಾಗಲಿ ಸಾಕಷ್ಟ್ ಕೃತಿಗ ಅರೆಭಾಷೆಲಿ ಹೊರಬಂದುಟು 1985 ರ್‌ಲಿ ಬೆಂಗ್ಳೂರ್‌ನ ದ.ಕ. ಮತ್ತೆ ಕೊಡಗು ಗೌಡ ಸಂಘದವು ಹೊರತಂದ 'ಗೌಡ ದೊನಿ' ಸ್ಮರಣ ಸಂಚಿಕೆಲಿ ಅನೇಕ ಅರೆಭಾಷೆ ಕವನಗಳ ಪ್ರಕಟಿಸೊಳೊ. ಹೊದ್ದೆಟ್ಟಿ ಭವಾನಿ ಶಂಕರನವು ಬರ್ದ ಮೊತ್ತ ಮೊದಲ ಅರೆಭಾಷೆ ಕವನ 'ಮೋಟಿ ಗೂಡೆನ ಮೊದುವೆ' ಈ ಸಂಚಿಕೆಲಿ ಮೊದಲಿಗೆ ಪ್ರಕಟಗೊಂಡ್ ಮತ್ತೆ 2003ರ್ಲಿ ಇದೇ ಹೆಸ್‌ರ್‌ಲಿ ಹೊರ ಬಂದ ಸ್ವತಂತ್ರ ಕವನ ಸಂಕಲನ ಬಂದುಟು. ಅಪ್ಪಟ ಅರೆಭಾಷೆ, ಅರೆಭಾಷಿಗರ ಜನಜೀವನ, ಸಂಪ್ರದಾಯ, ಜೀವನ ಶೈಲಿನ ರಸವತ್ತಾಗಿ ಈ ಕವನಗಳ್‌ಲಿ ತೆರ್‌ದಿಟ್ಟೊಳೊ. ಇಡೀ ಅರೆಭಾಷೆ ಸಾಹಿತ್ಯಕ್ಕೆ ಸಂಚಲನ ಮೂಡ್ಸಿದ ಕೃತಿ ಇದ್. ಇದರ್‌ಲಿ ಬರುವ 91 ಕವನಗಳ್‌ಲಿ 36 ಅರೆಭಾಷೆ ಕವನಗ.

2003 ರ್ಲಿ 'ಜೇನೆರಿ' ಕವನ ಸಂಕಲನಲಿ ಕೋಡಿಯವರ ಅರೆಭಾಷೆ ಲಿಪಿನ ಮೊತ್ತ ಮೊದಲ್‌ಗೆ ಬಳ್ಸಿದ ಕವಿ ಯಶವಂತ ಕುಡಕಲ್ಲುನವು. ಅಪ್ಪಟ ಅರೆಭಾಷೆಲಿ ಹೊರತಂದ 'ತೊಂಬರ' ಮತ್ತೆ 2007 ರ್‌ಲಿ 'ಜೇನೆರಿ' ಎಂಬ ಎರಡೂ ಕೃತಿಗ ಯಶಸ್ವಿ ಕೃತಿಗ. ಯಶವಂತನವು ಪಳೆ ತಲೆಮಾರ್‌ನವು ಅಲ್ಲದಿದ್ದರೂ ಅರೆಭಾಷೆನ ಮೂಲ ಶಬ್ದಗಳ ಬಳ್ಸಿಕಂಡ್ ಬಾರೀ ಪೊರ್ಲುಲಿ ಕವನಗಳ ಬರ್ದೊಳೊ... 2003ರ್‌ಲಿ ತುಂಬಾ ಯುವಕರಾಗಿದ್ದ ಯಶವಂತರ್ ಶೃಂಗಾರ ರಸನ ಭಾರಿ ಸೋಕುಲಿ ವ್ಯಕ್ತ ಪಡಿಸೊಳೊ. ಇದರ್ಲಿ ಬರುವ ಕವನಗ ಭಾವನ ಮೊದುವೆಲಿ, ಮೀಸೆ ಬಾಕನ,

ಅತ್ತಿಗೆನ ತಂಗೆ, ಹೊಸಸೆಂಟ್ರ್, ನನ್ನ ಗೂಡೆಗೆ ಈ ಎಲ್ಲಾ ಕವನಗಳ ಒದಿರೆ ಅಜ್ಜಂದರ್‌ಗೂ ಯೌವನದ ದಿನ ನೆನಪಾದರ್‌ಲಿ ಸಂಶಯ ಇಲ್ಲೆ.

2014ರ್‌ಲಿ ಡಾ। ಕರುಣಾಕರ ನಿಡಿಂಜಿಯವು ಬರ್ದ ಕವನ ಸಂಕಲನ 'ನೀಲಿದಾರಿ' ಅರೆಭಾಷೆಲಿ ಒಂದು ಸುಂದರ ಹಾಗೂ ಮಹತ್ವದ ಕೃತಿ. ಅರೆಭಾಷೆಲಿ ಕೂಡಾ ಛಂದೋ ಬದ್ಧವಾಗಿ ಬರೆಕೆ ಆದೆಂತ ಸಾಧಿಸಿ ತೋರಿಸೊಳೊ. ಛಂದೋರಹಿತ ಕವನಗ ಕೂಡಾ ಇರುವ ಇವರ ಈ ಕೃತಿಲಿ ಭಾವುಕತೆ, ವೈಚಾರಿಕತೆ ಮತ್ತೆ ಪ್ರಯೋಗ ಶೀಲತೆನ ಕಾಣಕ್. ಇಲ್ಲಿ ಬರ್ದ ತ್ರಿಪದಿಗಳ್‌ಲಿ ಛಂದಸ್ಸು, ಪ್ರಾಸ, ಲಯಬದ್ಧ ಗೇಯನ ನಾವು ಗುರುತಿಸಕ್. ಅರೆಭಾಷೆಗೆ ಒಂದು ಗಟ್ಟಿ ಕವನ ಸಂಕಲನನ ಇವು ಕೊಟ್ಟೊಳೊ. ಆಯ ಅರ್ತ್ ಹೊಡ್ದರೆ, ಅಪೂರ್ವ ಮಧುರ ಗಾನ ಅರೆಭಾಷೆಲಿ ಕೂಡಾ ಸಾಧ್ಯಂತ ತೋರ್ಸಿಕೊಟ್ಟೊವು ನಿಡಿಂಜಿಯವು.

2015ರ್‌ಲಿ ಕುಯಿಂತೋಡು ದಾಮೋದರನವು ಬರ್ದ ಕವನ ಸಂಕಲನ "ನಮ್ಮೂರ ಹಾಡ್ ಮತ್ತೆ ಭಕ್ತಿ ಗೀತೆಗ"; 2017ರ್ಲಿ ಪುನಃ: ಹೊದ್ದೆಟ್ಟಿ ಭವಾನಿ ಶಂಕರನವು ಬರ್ದ ಕವನ ಸಂಕಲನ 'ಅನುಭವ ಧಾರೆ': ಮೀನಗದ್ದೆ ಸುಂದರನವು ಪ್ರಕಟಿಸಿದ ಕವನ ಸಂಕಲನ "ಯಾಕೆನೆ, ಯಾಕೆನೆ ಬೇಜಾರೇಕೆ?" ಕೂಡಾ ಅರೆಭಾಷೆ ಸಾಹಿತ್ಯಲಿ ಸ್ಥಾನ ಪಡ್ಡ ಕೃತಿಗ.

ಜನಪ್ರಿಯ ಶಿಕ್ಷಕರಾಗಿದ್ದ ಅಡ್ಡಂಗಾಯ ಎಲ್ಯಣ್ಣ ಗೌಡ್ರ್ ಬರ್ದ, ಸಾಕಷ್ಟ್ ಕವನಗ ಪತ್ರಿಕೆ, ಸಂಚಿಕೆಗಳ್‌ಲಿ ಪ್ರಕಟ ಆವುಟು. ಮಂಡೆಕೋಲು, ಅಜ್ಜಾವರ ಗ್ರಾಮಗಳ್‌ಲಿ ಸಿದ್ಧವೇಷ ತಂಡಗಳ ರಚಿಸಿ ಪ್ರದರ್ಶನ ಕೊಟ್ಟೊಳೊ. ಇಂದಿಗೂ ಆವು ಸಜ್ಜುಗೊಳ್ಸಿದ ಸಿದ್ಧವೇಷ ತಂಡ ಅಜ್ಜಾವರಲಿ ಸಕ್ರಿಯವಾಗಿ ಉಟ್ಟು.

**ಕಥಾ ಸಂಕಲನ ಕ್ಷೇತ್ರಕ್ಕೆ ಬಾಕನ** - 2003ರ್ಲಿ ಬಾರಿಯಂಡ ಜೋಯಪ್ಪನವು ಬರ್ದ್ ಪ್ರಕಟಿಸಿದ ಕಥಾ ಸಂಕಲನ 'ಚಾಂಪಾ' ಈ ಕೃತಿ ಅರೆಭಾಷೆನ ಸುರೂನ ಕಥಾ ಸಂಕಲನ 1998ರ್‌ಲಿ 'ಯಾರ ಬೇಟೆ ಮತ್ತು ಇತರ ಪ್ರಸಂಗಗಳು' ಎಂಬ ಎರಡು ಕೃತಿಗ ಪೊಲ್ರುನ ಕೃತಿಗ. ಚೆನ್ನಾಗಿ ಓದ್ಸಿಕಂಡ್ ಹೋದೆ. ಕೊಡಗ್‌ನ ಪರಿಸರ, ಅಲ್ಲಿನ ಸಂಪ್ರದಾಯ, ಆಚರಣೆ, ಸಮಾರಂಭಗ, ಬೇಟೆ, ಕೃಷಿಕಾರ್ಯಗ, ಆಹಾರ ಮತ್ತೆ ಪಾನೀಯಗಳ ಒಟ್ಟಿಗೆ ಅಲ್ಲಿನ ಜನರ ಮಾನವೀಯ ಸಂಬಂಧಗಳ ಸುಂದರ ಚಿತ್ರಣನ ಕೊಡಗ್‌ನ ಅರೆಭಾಷೆಲಿ ಬರ್ದೊಳೊ.

ಹಳಬರ ಜೋಳಿಗೆಯ ಸಂಪಾದಕಿ ಶ್ರೀಮತಿ ಜ.ಬ ಚಟ್ಟಿಮಾಡನವು ತಮ್ಮ 'ಪರಬಾಳ್‌ನ ಪರಿಪಾಳೆಳು' ತುಳು ಕೃತಿನ 'ಹಳೆಬಾಳ್‌ನ ಹರ್ದ ಹಾಳೆಗ' ಎಂಬ ಹೆಸರ್‌ಲಿ ಅವೇ ಅನುವಾದ ಮಾಡಿ ಪ್ರಕಟಿಸೊಳೊ. ಚೆಂಬುನ ಉದಯಕುಮಾರಿಯವು ' ಹೊಸ ಬೊಡ್ಕ್' ಎಂಬ 20 ಕಥೆಗಳ ಒಂದು ಒಳ್ಳೆ ಕಥಾ ಸಂಕಲನ ಹೊರ ತಂದೊಳೊ.

**ಕಾದಂಬರಿ ಕ್ಷೇತ್ರಕ್ಕೆ** ಅರೆಭಾಷೆನ ಕೊಡುಗೆ ತುಂಬಾ ಕಡಿಮೆ. 2014ರ್‌ಲಿ ಡಾ। ಪ್ರಭಾಕರ ಶಿಶಿಲರ್ ಕನ್ನಡಲಿ ಬರ್ದ 'ಇರುವುದೆಲ್ಲವ ಬಿಟ್ಟು' ಕೃತಿನ ಅರೆಭಾಷೆಗೆ 'ಇರುದರ್ನೆಲ್ಲ

ಬುಟ್ಟು' ಎಂಬ ಹೆಸ್ರ್‌ಲಿ ಭಾಷಾಂತರ ಮಾಡಿ ತುಂಬಾ ಪರಿಣಾಮಕಾರಿ ಆಗಿ ಬರ್ದೊಳೊ ಕುಯಿಂತೋಡು ದಾಮೋದರನವು. ಅರೆಭಾಷೆಲಿ ಬರ್ದ ಇದೇ ಕಾದಂಬರಿ ಅರೆಭಾಷೆನ ಮೊದಲ ಕಾದಂಬರಿಂತ ಹೇಳಕ್. ಈ ಕಾದಂಬರಿಲಿ ಚಾರ್ಲ್ಸ್ ಡಿಕ್ವನ್‌ನ ಕಾದಂಬರಿ 'ಡೇವಿಡ್ ಕಾಪರ್ ಫೀಲ್ಡ್'ಲಿ 19ನೇ ಶತಮಾನದ ಇಂಗ್ಲೀಷ್ ಸಮಾಜನ ಚಿತ್ರಿಸಿದಾಂಗೆ, 20ನೇ ಶತಮಾನದ ಅರೆಭಾಷಿಗರ ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಸಾಂಪ್ರದಾಯಿಕ ಸ್ಥಿತಿಗತಿಗಳ ನೈಜ ಚಿತ್ರಣನ ಈ ಕೃತಿಲಿ ಕಾಣಕ್. ಹಬ್ಬ ಹರಿದಿನ, ಆಚರಣೆಗ, ರಾಜಿ ಸಂಪ್ರದಾಯ, ಮುಂತಾದ ಕಾರ್ಯಗಳ ನಮ್ಮ ಹಿರಿಯರ್ ಎಷ್ಟೊಂದು ಅರ್ಥ ಪೂರ್ಣವಾಗಿ ಆಚರಿಸುತ್ತಿದ್ದೋ ಎಂಬುದರ ಈ ಕೃತಿಲಿ ನಾವು ಕಾಣಕ್. ನಮ್ಮ ಗುರುಗ ಆದ ದಾಮೋದರವರ್‌ಂದ ಸ್ವತಂತ್ರ ಕಾದಂಬರಿ ಹೊರ ಬರ್‌ಲಿಂತ ನಮ್ಮ ನಿರೀಕ್ಷೆ. 2016ರ್ಲಿ ಕಟ್ರತನ ಲಲಿತಾ ಅಯ್ಯಣ್ಣನವು ಪ್ರಕಟಿಸಿದ ಕಾದಂಬರಿ 'ಮತ್ತೆ ಸಿಕ್ಕಿತ್ ಕುಂಕುಮ' ಅರೆಭಾಷೆಲಿ ಹೊರಬಂದ ಇನ್ನೊಂದು ಕಾದಂಬರಿ.

**ಅರೆಭಾಷೆ ಸಾಹಿತ್ಯದ ಕಥಾ ಕ್ಷೇತ್ರಕ್ಕೆ ಬಾಕನ** - 1992ರ್ಲಿ ಪ್ರಕಟಗೊಂಡ ವಿದ್ಯಾಧರ ಬಡ್ಡಡ್ಕರವರ ಎಕಾಡೆಮಿ ಪುರಸ್ಕೃತ ಕೃತಿ 'ಮಜಲು' ಕನ್ನಡಲಿ ಬರ್ದರೂ ಅದರ್ಲಿ ಬರುವ ಅರೆಭಾಷೆ ಸಂಭಾಷಣೆ, ಅಪ್ಪಟ ಅರೆಭಾಷೆ ಶಬ್ದಗಳ ಬಳ್ಸಿಕಂಡ್, ನಮ್ಮ ಸಮಾಜದ ಸ್ಥಿತಿಗತಿಗ, ಅಂಧಾನುಕರಣೆಗ ಮತ್ತೆ ಈ ಮಣ್ಣ್‌ನ ಸೊಗಡ್‌ನ ಚಿತ್ರಿಸುವಲ್ಲಿ ಯಶಸ್ವಿಯಾಗೊಳೊ. ವಿದ್ಯಾಧರರ ಪೆನ್ನ್‌ಂದ ಇಂತ ಇನ್ನಷ್ಟ್ ಅರೆಭಾಷೆ ಕಥೆಗ ಬರೊಕೂಂತ ನಮ್ಮ ಆಶೆ.

1995 ರ್‌ಲಿ ತೇಜಕುಮಾರ್ ಬಡ್ಡಡ್ಕನವು ಬರ್ದ ಸ್ಪಂದನ ಸಾಹಿತ್ಯ ಪ್ರಶಸ್ತಿ ಕೃತಿ 'ಹಿರಣ್ಯ ಗರ್ಭ' ಮತ್ತೆ 'ಮದಿರೆ ನಿಶ್ಚಲ' 'ಉಗ್ಗಪ್ಪ ಗೌಡರ ವಿಜಯೋತ್ಸವ' ಎ.ಕೆ. ಹಿಮಕರರ 'ಏಳಿ ಎದ್ದೇಳಿ ನಿಮ್ಮ ಹಕ್ಕುಗಳಿಗಾಗಿ ಏಳಿ' ಎಂಬ ಮಕ್ಕಳ ಹಕ್ಕುಗಳ ಬಗ್ಗೆ ಬರೆದ ಅನುವಾದಿತ ಕೃತಿ, 'ಮನೆಗೆ ಬಂದ ನೀಲಿ ಕುದುರೆ ಮತ್ತು 'ಎಸೆದುನೋಡಿ, ಸುಟ್ಟು ನೋಡಿ,' ಕೃಷಿ ತಂತ್ರಜ್ಞಾನಕ್ಕೆ ಸಂಬಂದಿಸಿದಂತೆ ಬರೆದ ಅನೇಕ ಲೇಖನಗ; ಅನುವಾದಿತ ಕೃತಿ 'ನೇತಾಜಿ ಭಾರತ';

- 2000ರ್‌ಲಿ ಡಾ। ಸುಂದರ ಕೇನಾಜೆ ಬರ್ದ 'ನೇಮ'
- 1999ರ್‌ಲಿ ವೇದಾವತಿ ಅನಂತನವು ಬರ್ದ 'ಪಯಣ'
- 2013 ರ್‌ಲಿ ಸುಳ್ಯದ ಮೊತ್ತ ಮೊದಲ ಮಹಿಳಾ ಕಾದಂಬರಿಗಾರ್ತಿಯಾದ ಲಲಿತಾಜ ಮಲ್ಲಾರ ಬರ್ದ 'ನಮ್ಮೂರ ದೊರೆ' ಅವೇ ಅದ್‌ಕಿಂತಲೂ ಹಿಂದೆ ಬರ್ದ ' ದಡ ಸೇರದ ದೋಣಿ'
- ಪರಿಸರ ಕವಿ ಸಂಜೀವ ಕುದ್ಪಾಜೆ ಬರ್ದ 'ಕಾಮನ ಬಿಲ್ಲ್‌ನ ಸೈನಿಕರ್' ಅವರ ಸಂಶೋಧನಾ ಕೃತಿ 'ಕನ್ನಡ ಕಾವ್ಯಗಳ್‌ಲಿ ಹಂದಿ ಬೇಟೆಯ ವರ್ಣನೆ'

ಈ ಎಲ್ಲಾ ಕೃತಿಗ ಕನ್ನಡಲಿ ಬಂದರೂ ಇದರ್ಲಿ ಬರುವ ಸನ್ನಿವೇಷಗಳ್‌ಲಿ ಅರೆಭಾಷೆ ಸಂಸ್ಕೃತಿ, ಸಂಪ್ರದಾಯ, ಆಚಾರ, ವಿಚಾರ, ಪರಿಸರದ ಬಗ್ಗೆ ಸ್ಪಷ್ಟ ಚಿತ್ರಣನ ಕಾಣಕ್.

- ಡಾ। ವಿಶ್ವನಾಥ ಬದಿಕಾನನವು ಮೊದಲ ಬಾರಿಗೆ ಸುಳ್ಯ ಪರಿಸರದ ಅರೆಭಾಷೆಲಿರುವ ಜನಪದ ಕತೆಗಳ ಸಂಗ್ರಹಿಸಿ ಕನ್ನಡ ಜಾನಪದ ಅಧ್ಯಯನಕ್ಕೆ ಒಳ್ಳೆ ಕಾಣಿಕೆ ಕೊಟ್ಟೊಳೊ. ಇವರ ಜನಪದ ಕತೆಗಳ ಕೃತಿ 'ಗೌಡ ಕನ್ನಡ ಜನಪದ ಕತೆಗಳು ಮತ್ತೆ ಆಶಯ ಸೂಚಿ' ಒಂದು ಮಹತ್ವ ಪೂರ್ಣ ಕೃತಿ.
- ಯು. ಸುಬ್ರಾಯ ಗೌಡ, ಎಂ.ಜಿ ಕಾವೇರಮ್ಮ, ಎಸ್.ಆರ್. ಹೂವಯ್ಯ, ಭವಾನಿಶಂಕರ ಅಡ್ತಲೆ–ಇವು ಪತ್ರಿಕೆಗಳ್‌ಲಿ, ಸಂಚಿಕೆಗಳ್‌ಲಿ ತುಂಬಾ ಅಂಕಣಗಳ, ಮತ್ತೆ ಲಲಿತ ಪ್ರಬಂಧಗಳ ಅರೆಭಾಷೆಲಿ ಬರ್ದವರ್‌ಲಿ ಪ್ರಮುಖರ್, ಇದರೆಲ್ಲಾ ಪ್ರಕಟಿಸಿದ ಸುದ್ದಿ ಪತ್ರಿಕೆನ ಕೊಡುಗೆನ ನಾ ಮತ್ತೆ ನೆನ್ಸಿಕಣೆ. ಎಂ.ಜಿ ಕಾವೇರಮ್ಮನವರ ಅರೆಭಾಷೆ ಬರವಣಿಗೆಲಿ, ಅದ್ ಅಂಕಣ ಇರ್‌ಲಿ, ಕವನ ಇರ್‌ಲಿ, ಲಲಿತ ಪ್ರಬಂಧ ಇರ್‌ಲಿ – ಇಲ್ಲಿ ಚಿಂತನೆಗ ಭಾವನೆಗ ಅರೆಭಾಷೆಲಿ ತುಂಬಾ ಆಪ್ತವಾಗಿದ್ದ್ ನಾವು 50 ವರ್ಷಗಳ ಹಿಂದೆನ ಆ ಕಾಲಕ್ಕೆ ಹೋದಾಂಗೆ ಆದೆ.

**ಅರೆಭಾಷೆ ನಾಟಕ ಕ್ಷೇತ್ರಕ್ಕೆ ಬಂದರೆ–**

- 1967 ರ್ಲಿ ಟಿ.ಜಿ ಮುಡೂರು ಬರ್ದ ' ಅತ್ತೆಗೆ ತಾಳಿ' ಅರೆಭಾಷೆನ ಮೊತ್ತ ಮೊದಲ ನಾಟಕ ಕೃತಿಂತ ಅನ್ಸಿದೆ. ಮುಂದೆ ಅವು 2016ರಲಿ 'ಬೊಳ್ಪಾಕನ ಮುಕ್ತ್' ಎಂಬ ಅರೆಭಾಷೆ ನಾಟಕ ಕೃತಿನ ನೀಡ್ಯೊಳೊ.
- 1995ರ್ಲಿ ವಿದ್ಯಾಧರ ಬಡ್ಡಡ್ಕನವು 'ಕೆದಂಬಾಡಿ ರಾಮಗೌಡ' ಎಂಬ ಅರೆಭಾಷೆ ನಾಟಕ ಬರ್ದೊಳೊ. ಈ ಕೃತಿ ರಂಗ ಪ್ರಯೋಗ ಕೂಡಾ ನಡ್ದ್ ಯಶಸ್ ಕಂಡುಟು.
- 1999ರ್ಲಿ ಎನ್. ಎಸ್. ದೇವಿಪ್ರಸಾದ್ ಸಂಪಾಜೆ ಬರ್ದ 'ಹೇಂಗಿತ್ತ್ ಹೇಂಗಾತ್' ಅರೆಭಾಷೆಲಿ ಬಂದ ಇನ್ನೊಂದು ನಾಟಕ ಕೃತಿ. ನಾವು ಆರಾಧಿಸುವ 'ಶೀರಾಡಿ ಭೂತ' ಎಂಬ ನಾಟಕನ ರಂಗ ಪ್ರಯೋಗ ಮಾಡಿ ಕೆಲವು ಪ್ರದರ್ಶನ ಕಂಡುಟು.
- ಇತ್ತೀಚೆಗೆ ಪೂರ್ಣಚಂದ್ರ ತೇಜಸ್ವಿಯವರ 'ಕರ್ವಾಲೊ' ಕೃತಿನ ಅರೆಭಾಷೆ ನಾಟಕ ಆಗಿ ಮೋಹನ ಸೋನಾ ನಿರ್ದೇಶಿಸಿ ರಂಗ ಪ್ರಯೋಗ ಮಾಡಿ ಯಶಸ್ಸ್ ಕಂಡೊಳೊ. ಜಾನಪದ ಎಕಾಡೆಮಿ ಪ್ರಶಸ್ತಿ ವಿಜೇತ ಮೋಹನ ಸೋನಾ ಒಬ್ಬ ಅತ್ಯುತ್ತಮ ನಾಟಕ ನಿರ್ದೇಶಕರಾಗಿದ್ದ್ ಸೋಣಂಗೇರಿನ ಬಯಲು ಚಿತ್ರಾಲಯ ಆಗಿ ಹಿಂದೊಮ್ಮೆ ರೂಪಿಸಿದ ಕೀರ್ತಿ ಇವರದ್ದ್.
- ಲೋಕೇಶ್ ಊರುಬೈಲ್, ಭವಾನಿಶಂಕರ ಅಡ್ತಲೆವು ನಿರ್ದೇಶಿಸಿ ಪ್ರದರ್ಶಿಸಿದ 'ಮಾಯಕ' ಎಂಬ ಅರೆಭಾಷೆ ನಾಟಕನ ಅನೇಕ ಪ್ರದರ್ಶನ ಕಂಡುಟು.
- ನಾಟಕ ಕ್ಷೇತ್ರಲಿ ರಂಗಾಯಣ ನಟಿ ಗೀತಾ ಮೋಂಟಡ್ಕ ರಾಷ್ಟ್ರಿಯ ಹಾಂಗೂ ಅಂತರಾಷ್ಟ್ರೀಯ ಮಟ್ಟಲಿ ಹೆಸ್ರ್ ಮಾಡ್ಯೊಳೊ.
- ಅರೆಭಾಷೆಲಿ ಕೂಡಾ ಯಕ್ಷಗಾನ ಪ್ರದರ್ಶನಗ ನಡ್ದುಟು. 2001ರ್‌ಲಿ ನಾರಾಯಣ ಕೊಳ್ತಿಗೆ, ಪ್ರಭಾಕರ ಶಿಶಿಲ, ಉಬರಡ್ಕ ಉಮೇಶ, ರೆಂಜಾಳ ರಾಮಕೃಷ್ಣ, ಸುಧಾಕರ ಕಾಂತಮಂಗಲನವು ಮುಖ್ಯ ಪಾತ್ರಗಳ್‌ಲಿ ಪಾಲ್ಗೊಂಡ್ 'ಕೃಷ್ಣಾರ್ಜುನ ಕಾಳಗ' ಎಂಬ ಪ್ರಸಂಗನ ಅರೆಭಾಷೆಲಿ ಆಡಿತೋರಿಸೊಳೊ. ಅರೆಭಾಷೆಲಿ ಇದ್ ಮೊತ್ತ

ಮೊದಲ ಯಕ್ಷಗಾನ ಪ್ರಯೋಗ ಇರೊಕು.

- ಚಂದ್ರಶೇಖರ ಪೆರಾಜೆನವು ಕೂಡಾ ಅರೆಭಾಷೆಲಿ ಯಕ್ಷಗಾನ ಪ್ರಸಂಗನ ನಿರ್ದೇಶಿಸಿ ಪ್ರದರ್ಶಿಸೊಳೊ.
- ಸುಭಾಸ್ ಪಂಜ ನಂತಹ ಯುವ ಕಲಾವಿದರ್ ಅರೆಭಾಷೆಲಿ ನಾಟಕ, ರೂಪಕ, ನೃತ್ಯರೂಪಕ, ಕೋಲಾಟ, ಜನಪದ ನೃತ್ಯಗಳ ನಿರ್ದೇಶಿಸಿ ಯಶಸ್ವಿಯಾಗೊಳೊ. ರಮೇಶ್ ಮೆಟ್ಟಿನಡ್ಕನವು ಅರೆಭಾಷೆ ಹಾಡ್‌ಗಳ 'ರಸಮಂಜರಿ' ಕಾರ್ಯಕ್ರಮ ನೀಡ್ಯೊಳೊ. ಅಮ್ಮಾಜೀರ ಪೊನ್ನಪ್ಪನವು ಅರೆಭಾಷೆ ಸಾಂಸ್ಕೃತಿಕ ಕ್ಷೇತ್ರಲಿ ತುಂಬಾ ಕೆಲ್ಸ ಮಾಡ್ಯೊಳೊ.
- ಅರೆಭಾಷೆಲಿ ಕೆಲವೊಂದು ಕಿರುಚಿತ್ರಗ ಹೊರಬಂದರೂ, ಅದ್ ಅಷ್ಟ್ ಜನಪ್ರಿಯತೆ ಗಳ್ಸಿತ್ಲೆ. ವಿಷ್ಣು ಕ್ರಿಯೇಷನ್ಸ್‌ರವರ ಅರೆಭಾಷೆ ಕಿರುಚಿತ್ರ 'ನೆಂಟೆತಿ ಗೂಡೆ' ಒಂದಷ್ಟ್ ಹೆಸ್‌ರ್ ಮಾಡ್ತ್. ಆದರೆ ನೈಜತೆನ ಕೊರತೆ, ಅರೆಭಾಷೆ ಮಾತಾಡುವ ಶೈಲಿನ ಕೊರತೆಂದಾಗಿ ಈ ಚಿತ್ರಗ ಯಶಸ್ವಿ ಆತ್‌ಲೆ.
- ದೊಡ್ಡ ಬ್ಯಾನರ್ ಅಡಿಲಿ, ಒಳ್ಳೆ ನಟರ ಹಾಕಿಕಂಡ್, ಅಪ್ಪಟ ಅರೆಭಾಷೆ ಸಂಭಾಷಣೆನ ಜೋಡ್ಸಿ ಕಂಡ್, ನೈಜ, ಅಭಿನಯ ಕೊಟ್ರೆ ಅರೆಭಾಷೆಲಿ ಕೂಡಾ ಚಿತ್ರ ತಯಾರ್ ಮಾಡಕ್. ತುಳು, ಕೊಡವ, ಕೊಂಕಣಿ ಭಾಷೆಲಿ ಇದರ ಮಾಡಿ ತೋರಿಸೊಳೊ.
- **ಪತ್ರಿಕಾ ರಂಗಕ್ಕೆ**– ಬಂದರೆ ಡಾ। ಶಿವಾನಂದರ ಸುದ್ದಿ ಪತ್ರಿಕೆ ಮತ್ತೆ ಸುದ್ದಿ ವಿಶೇಷಾಂಕಗ ಅರೆಭಾಷೆಗೆ ಬೆಂಬಲವಾಗಿ ನಿಂತದರ ನಾವು ನೆನ್ಸಿಕಣ್ಣೇಬೇಕು. ಕವನಗ ಅಂಕಣಗ ಲಲಿತ ಪ್ರಬಂಧಗ, ಕಥೆಗಳ ಪ್ರಕಟಿಸಿ ಅರೆಭಾಷೆನ ಬೆಳ್ಸಿಕೆ ಅವಕಾಶ ಮಾಡಿಕೊಟ್ಟೊಳೊ. 'ಅಮರ ಸುಳ್ಯ ಸುದ್ದಿ' ಪತ್ರಿಕೆಲಿ ಕೂಡಾ ಅರೆಭಾಷೆ ಕಥೆ ಕವನಗಳ ಪ್ರಕಟಿಸಿಕೆ ಅವಕಾಶ ಕೊಟ್ಟೊಳೊ. ಸ್ವತಃ ಅರೆಭಾಷೆಲಿ ಬರೆವ ಜಯಪ್ರಕಾಶ್ ಕುಕ್ಕೇಟಿ ಅವರ್‌ಂದ ಅರೆಭಾಷೆ ಸಾಹಿತ್ಯ ಇನ್ನಷ್ಟು ನಿರೀಕ್ಷಿಸುತ್ತಾ ಉಟ್ಟು. ನೆರೆಯ ಕೊಡಗ್‌ಲಿ ಪಟ್ಟಡ ಪ್ರಭಾಕರನವು ಹೊರತಾತಿದ್ದ 'ಕೊಡಗು ಸಂಗಾತಿ' ಮಾಸಿಕ ಈಗ ನಿತ್ತ್ ಹೋದರೂ ಅರೆಭಾಷೆ ಸಾಹಿತ್ಯಕ್ಕೆ ಮತ್ತೆ ಅದರ ಬೆಳವಣಿಗೆಗೆ ಸಾಕಷ್ಟ್ ಕೊಡುಗೆ ಕೊಟ್ಟೆಳೊ. ಎಂ.ಬಿ ಸದಾಶಿವರ 'ಚೇತನ' ಪತ್ರಿಕೆನ ಮುನ್ನಡ್ಸಿದ ಸೂದನ ಈರಪ್ಪನವು ಅರೆಭಾಷೆಗೆ ತಮ್ಮ ಪತ್ರಿಕೆಲಿ ಒಂದಷ್ಟ್ ಅವಕಾಶ ಕೊಟ್ಟೆಳೊ. ಈಗ ವಿನೋದ್ ಮೂಡಗದ್ದೆವು 'ಮುಡ್ಪು' ಎಂಬ ಸಂಚಿಕೆನ ಹೊರತಂದ್ ಅರೆಭಾಷೆ ಸಾಹಿತ್ಯಕ್ಕೆ ಕೊಡುಗೆ ಕೊಡ್ತಾ ಒಳೊ. ನಮ್ಮೂರ್‌ಲಿ ಹೊರತಂದ ಸ್ಮರಣ ಸಂಚಿಕೆಗಳ್‌ಲಿ ಕೂಡಾ ಅರೆಭಾಷೆ ಲೇಖನ, ಕವನ, ಕಥಗ ಪ್ರಕಟಣೆ ಕಂಡೊಳೊ.
- ಅರೆಭಾಷೆ ಸಾಹಿತ್ಯನ ಶ್ರೀಮಂತಗೊಳ್ಸಿಕೆ ನಮ್ಮಲ್ಲಿ ಮನ್ಸ್ ಮಾಡ್ರೆ ದೊಡ್ಡ ತಂಡನೇ ಉಟ್ಟು. ಶೇಷಗಿರಿ ಮೂಕಮಲೆ, ಯತಿರಾಜ ಭೂತಕಲ್ಲು, ನೂಜಾಲು ಪದ್ಮನಾಭ ಗೌಡ್ರ್, ಪಿ.ಎಂ. ಆನಂದ ಗೌಡ್ರ್, ಜಯರಾಜ ಕುಕ್ಕೇಟಿ, ಕುಸುಮಾವತಿ ಕುಕ್ಕೇಟಿ, ಲೋಹಿತಾಶ್ವ ಆನೆಕಲ್ಲು, ಪ್ರಸನ್ನ ಬಡ್ಡಡ್ಕ, ಮೋಹನ್ ಪಾರೆಪ್ಪಾಡಿ, ಯು.ಎಸ್.

ಚಿದಾನಂದ, ಸೀತಾರಾಮ ಮಜಿಕೋಡಿ, ಯು.ಬಿ. ಕುಸುಮಾವತಿ, ಲೋಕೇಶ್ ಊರುಬೈಲು, ಮಾಧವ ಮೂಕಮಲೆ, ಚಂದ್ರಶೇಖರ ಪೇರಾಲು, ಸೀತಾರಾಮ ಕೇವಳ, ಶರತ್ ಮಡ್ತಿಲ, ಸತ್ಯಪ್ರಕಾಶ್ ದೇರಪ್ಪಜ್ಜನಮನೆ, ಜಯರಾಮ ದೇರಪ್ಪಜ್ಜನಮನೆ, ಶಶಿಧರ ಪಳಂಗಾಯ, ಮಹಾಬಲ ಕುಳ, ಸೋಮಶೇಖರ ನೇರಳ, ಉಂಞನ ಮಂಜುನಾಥ, ಬಾಬುಗೌಡ ಅಚ್ರಪ್ಪಾಡಿ, ಜಯರಾಮ ಹಾಡಿಕಲ್ಲು, ಎಂ.ಡಿ. ವಿಜಯಕುಮಾರ್, ರತ್ನಾವತಿ ನರಿಯೂರು, ಎಂ.ಜಿ ಕಜೆ, ಶ್ರೀಧರ ಪಾನತ್ತಿಲ, ಲೋಕೇಶ್ ಪೆರ್ಲಂಪಾಡಿ, ಪದ್ಮಕಾರ್ಕಳ, ಶ್ರೀದೇವಿ ಅಂಬೆಕಲ್ಲು, ಷಣ್ಮುಖ ಕುತ್ಯಾಳ, ವೆಂಕಪ್ಪ ಗೌಡ ಕೇನಾಜೆ, ರವಿರಾಜ ಒಳಲಂಬೆ, ದಿನೇಶ್ ಹಾಲೆಮಜಲು, ಜ್ಞಾನೇಶ್ ನಿಡ್ಯಮಲೆ, ಮಾಧವ ಹರ್ಲಡ್ಕ, ಪದ್ಮಯ್ಯ ಸಿ.ಹೆಚ್., ಶರ್ಮಿಳಾ ಊರುಬೈಲು, ನಾರಾಯಣ ಶೇಡಿಕಜೆ, ವೀಣಾ ಮಡಪ್ಪಾಡಿ, ಚರಣ್ ಐವರ್ನಾಡು, ಎಂ.ಎಸ್. ಗೀತಾ, ಶ್ವೇತಾ ಮಡಪ್ಪಾಡಿ, ಹೇಮಾ ವೆಂಕಟ್, ದಯಾನಂದ ಕೊರತ್ತೋಡಿ, ಹೇಮಲತಾ ಮೀನಗದ್ದೆ, ಅನುರಾಧ ಬಾಲಕೃಷ್ಣ ಕಡ್ಯ, ನಿವೇದಿತಾ ಕುದ್ಪಾಜೆ, ಪೂರ್ಣಿಮಾ ಮಡಪ್ಪಾಡಿ, ಹರಿಣಾಕ್ಷಿ ಕೇವಳ, ಹವ್ಯಶ್ರೀ ಪುರ, ಲತಾಶ್ರೀ ಮೋಂಟಡ್ಕ, ಲೋಕೇಶ್ ಕುಂಚಡ್ಕ, ವಿನೋದ್ ಮುಡುಪು, ಕೋರನ ಸರಸ್ವತಿ, ಸುಶೀಲ ಸುಬ್ರಮಣಿ–ಪ್ರತಿಭಾವಂತರಾದ ಇವೆಲ್ಲಾ ಗಂಭೀರವಾಗಿ ತೊಡಗಿಸ್‌ಕಂಡರೆ ಅರೆಭಾಷೆ ಸಾಹಿತ್ಯ ಇನ್ನಷ್ಟ್ ಶ್ರೀಮಂತ ಆದರ್ಲಿ ಸಂಶಯನೇ ಇಲ್ಲೆ.

- ಇದರೊಟ್ಟಿಗೆ, ಈಗಾಗಲೇ ಕನ್ನಡ ಸಾಹಿತ್ಯದಲ್ಲಿ ತೊಡಗಿಸಿಕಂಡ ಸ್ಮಿತಾ ಅಮೃತರಾಜ್, ಸಂಗೀತಾ ರವಿರಾಜ್, ಎಂ.ಟಿ. ಲೀಲಾಕುಮಾರಿ, ಗುಲಾಬಿ ಬಿಳಿಮಲೆ, ಅನುರಾಧ ಕುರುಂಜಿ, ಗೋಪಾಲ್ ಪೆರಾಜೆ, ಜಯಪ್ರಕಾಶ್ ಕುಕ್ಕೇಟಿ, ಯು. ಸುಬ್ರಾಯ ಗೌಡ, ಎ.ಕೆ. ಹಿಮಕರ, ಸಂಜೀವ ಕುದ್ಪಾಜೆ, ಎಸ್.ಆರ್. ಹೂವಯ್ಯ, ಎಂ.ಜಿ ಕಾವೇರಮ್ಮ, ವೇದಾವತಿ ಅನಂತ, ವಿಮಲಾರುಣ ಪಡ್ಡಂಬೈಲು, ಉಮೇಶ್ ಬಿಳಿಮಲೆ, ಭವಾನಿಶಂಕರ ಅಡ್ತಲೆ, ಲೀಲಾದಾಮೋದರ, ಶಿವಾನಂದ ರಂಗತ್‌ಮಲೆ, ಕುಂಞೇಟಿ ಶಿವರಾಮ, ಹೊಸೊಳಿಕೆ ಯೋಗಿಶ್, ಡಾ। ಪುನೀತ್ ರಾಘವೇಂದ್ರ ಕುಂಟುಕಾಡು, ಸಹನಾ ಗಿರೀಶ್, ಪ್ರಶಾಂತಿ ಬಡ್ಡಡ್ಕ, ಹೇಮಲತಾ ಮೀನಗದ್ದೆ, ನಿವೇದಿತಾ ಕುದ್ಪಾಜೆ– ಇದರ್‌ಂದಲೂ ಅರೆಭಾಷೆ ಸಾಹಿತ್ಯ ಕ್ಷೇತ್ರಲಿಇನ್ನಷ್ಟ್ ನಿರೀಕ್ಷಿಸಕ್.

**ಅರೆಭಾಷೆ ಸಂಸ್ಕೃತಿ ಬೆಳ್ಸುವ ಜವಾಬ್ದಾರಿ** - ಅರೆಭಾಷೆನೊಟ್ಟಿಗೆ ನಮ್ಮ ಸಂಸ್ಕೃತಿನೂ ಬೆಸೆದ್ ಹೋವುಟು. ಅರೆಭಾಷೆನ ಹಿಂದೆ ಒಂದು ಸಂಸ್ಕೃತಿ ಉಟ್ಟು. ಈ ಸಂಸ್ಕೃತಿಂದಾಗಿ ಭಾಷೆ ಬೆಳ್ದುಟು. ಹಾಂಗಾಗಿ ಅರೆಭಾಷೆನ ಹಿಂದೆ ಅರೆಭಾಷೆ ಸಂಸ್ಕೃತಿನ ನಾವು ಕಾಣಕ್. ಇಲ್ಲಿ ಅರೆಭಾಷೆ ಸಂಸ್ಕೃತಿಂತ ಹೇಳ್ರೆ ಅದರ ಮಾತೃಭಾಷೆ ಆಗಿ ಮಾತಾಡುವ ಗೌಡ ಜನಾಂಗದ ಸಂಸ್ಕೃತಿಂತ ಹೇಳ್ರೆ ಖಂಡಿತಾ ತಪ್ಪಾಕಿಲೆ. ನೆಪೋಲಿಯನ್ ಒಂದು ಕಡೆ ಹೇಳಿಟು, ಒಂದು ಸಂಸ್ಕೃತಿನ ನಾಶ ಮಾಡೊಕುಂತಾದರೆ ಅಲ್ಲಿನ ಭಾಷೆನ ನಾಶ

ಮಾಡ್‌ರೆ ಅತ್‌ಂತ ಆದರ್‌ಂದ ನಮ್ಮ ಸಂಸ್ಕೃತಿ ಬೆಳಿಯೊಕುಂತಾದರೆ ನಮ್ಮ ಭಾಷೆ ಬೆಳಿಯೊಕು. ನಮ್ಮ ಭಾಷೆಗೆ ಚ್ಯುತಿ ಬಂದರೆ, ಸಂಸ್ಕೃತಿಗೂ ಚ್ಯುತಿ ಬಂದದೆ.

ನಮ್ಮ ಸಂಸ್ಕೃತಿ ಮತ್ತೆ ಭಾಷೆ ಬೆಳಿಯೊಕುಂತಾದರೆ ಇದರ ಮಾತೃಭಾಷೆ ಆಗಿ ಮಾತಾಡುವ ನಾವೇ ಆಸಕ್ತಿವಹಿಸೊಕು. ವ್ಯಾವಹಾರಿಕವಾಗಿ ಮಾತಾಡೊವು ಈ ಬಗ್ಗೆ ಆಸಕ್ತಿ ವಹಿಸುವ ಸಾಧ್ಯತೆ ಇಲ್ಲೆ. ಏಕೆಂತೇಳ್ರೆ ಅವರ ಮಾತೃ ಭಾಷೆ ಬೇರೆ ಆಗಿದ್ದದೆ. ಅದರ್‌ಂದ ಅರೆಭಾಷೆನ ಬೆಳ್ಸುವ ಜವಾಬ್ದಾರಿ ನಮ್ಮ ಗೌಡ ಜನಾಂಗಕ್ಕೆ ಉಟ್ಟು ಎಂಬುದರ್ಲಿ ಎರಡು ಮಾತಿಲ್ಲೆ. ನಾವು ಮಾತಾಡೊಕು, ನಮ್ಮ ಕಾರ್ಯಕ್ರಮಗಳ್‌ಲಿ ಮಾತಾಡೊಕು, ನಮ್ಮ ಸಮಾಜಲಿ ಮಾತಾಡೊಕು, ನಮ್ಮ ಕಾರ್ಯಕ್ರಮಗಳ್‌ಲಿ ಮಾತಾಡೊಕು, ನಮ್ಮ ಮಕ್ಕಳಿಗೆ ಕಲ್ಸೊಕು, ಅವು ಕೂಡಾ ಮಾತಾಡುವಾಂಗೆ ಆಕು. ಮಲೆಯಾಳಿಗ, ತಮಿಳರ್ ಓಂದಿಯವು, ನಮ್ಮೊಟ್ಟಿಗೆ ಅವರ ಭಾಷೆಲಿಯೇ ಮಾತನಾಡುವೆ. ಇದ್ ನಾವ್‌ಗೆ ಮಾದರಿ ಆಕು.

ಅರೆಭಾಷೆ ಒಂದು ಜನಾಂಗದ ಭಾಷೆ ಆದರ್‌ಂದ ಮೊದಲ್‌ನೇ ಹಂತಲಿ ನಮ್ಮ ಜನಾಂಗದವರ ಮನೆ ಮನೆಯ ಭಾಷೆ ಆಕು. ಎರಡನೇ ಹಂತಲಿ ನಮ್ಮ ಜನಾಂಗನ ಮೀರಿ ಬೆಳಿಯೊಕು ಮೂರನೇ ಹಂತಲಿ ನಮ್ಮ ಪ್ರದೇಶನ ಮೀರಿ ಬೆಳಿಯೋಕು.

ಉದಾ: ತುಳು. ಮೊದಲಿಗೆ ತುಳು ಒಂದು ಜನಾಂಗದ ಭಾಷೆ ಆಗಿತ್. ಜೈನ ಅರಸರ ಭಾಷೆ ಆಗಿತ್ ಎರಡ್ನೇ ಹಂತಲಿ– ಆ ಮೇಲೆ ಅದ್ ಜನಾಂಗನ ಮೀರಿ ಬೆಳ್ತ್. ಬಂಟ್ರ್‌ಗ, ಪೂಜಾರಿಗ, ಕುಲಾಲ್‌ಗ, ಮೊಗವೀರರ್‌ಗ ಎಲ್ಲವೂ ಮಾತಾಡಿಕೆ ಸುರುಮಾಡ್ದೊ.

ಮೂರ್ನೆ ಹಂತಲಿ – ಅದ್ ಪ್ರದೇಶನ ಮೀರಿ ಬೆಳ್ತ್. ದಕ್ಷಿಣ ಕನ್ನಡಂದ ಈಗ ಬೆಂಗ್ಳೂರ್ ಮುಂಬಾಯಿಗೆ ಎತ್ತಿಟು. ಅರೆಭಾಷೆ ಓೀಂಗೆನೆ ಆಕು. ಪ್ರಸ್ತುತ ಅರೆಭಾಷೆ ಮೊದಲ ಹಂತಲಿ ಹಾಂಗೂ ಅಲ್ಪ ಸ್ವಲ್ಪ ಎರಡನೇ ಹಂತ ಹಾಂಗೂ ಒಂದಷ್ಟ್ ಮೂರ್ನೆ ಹಂತಕ್ಕೆ ತಲ್ಪಿಟು. ಇದ್ ಗಟ್ಟಿ ಆಕು.

ಜಾತಿ ಜಾತಿಗಳೊಟ್ಟಿಗೆ, ಧರ್ಮ ಧರ್ಮಗಳೊಟ್ಟಿಗೆ ಬಾಂಧವ್ಯ, ಸಾಮರಸ್ಯ ಬೆಳ್ಸುವಲ್ಲಿ ಭಾಷೆ ತುಂಬಾ ಪ್ರಮುಖ ಪಾತ್ರವಹಿಸಿದೆ. ಸುಳ್ಯ ತಾಲೂಕ್‌ಲಿ ಕನ್ನಡ, ಅರೆಭಾಷೆ, ತುಳು, ಮಲಯಾಳ, ಹವ್ಯಕ, ತಮಿಳು ಓೀಂಗೇ 5–6 ಭಾಷೆಗಳ ಮಾತಾಡ್ತ ನಮ್ಮ ಬಾಂಧವ್ಯ, ಸಾಮರಸ್ಯನ ಬೆಳ್ಸಿಕಂಡ್ ಇರ್ದು ನಾವು ಕಾಣ್‌ವ ಸ್ವಾಗತಾರ್ಹ ಬೆಳವಣಿಗೆ.

ಅರೆಭಾಷೆಗೆ ಮೂರು ಅಪಾಯ ಉಟ್ಟು, ಒಂದ್ ಇಂಗ್ಲೀಷ್‌ದ್, ಇಂಗ್ಲೀಷ್ ಕಲಿಯೊಕು ನಿಜ. ವ್ಯಾವಹಾರಿಕ ಭಾಷೆ ಆಗಿ ಇಂದ್ ಇಂಗ್ಲೀಷ್ ಬೇಕೇ ಬೇಕು. ಆದರೆ ನಮ್ಮ ದೈನಂದಿನ ಜೀವನಲಿ ಇದರ ಅಗತ್ಯ ಇಲ್ಲೆ. ಅದ್ ನಮ್ಮ ಭಾಷೆನ ಹಾಳ್ ಮಾಡ್ದೆ, ನಮ್ಮ ಭಾಷೆಲಿರುವ ಆತ್ಮೀಯತೆನ ಕಸಿದ್ ಕಂಡದೆ.

ಉದಾ: 1. ನಾ ರೀಸೆಂಟ್ ಆಗಿ ಬೆಂಗ್ಳೂರ್‌ಗೆ ಹೋಗಿದ್ದೆ, ಅಲ್ಲಿ ನಾವು ಆನಂದರಾವ್ ಸರ್ಕಲ್‌ನ ಒಂದು ಲಾಡ್ಜ್‌ಲಿ ಸ್ಟೇ ಮಾಡ್ದೊ. ಬೆಂಗ್ಳೂರು ಈಗ

ವಂಡರ್‌ಫುಲ್ ಆಗಿ ಡೆವೆಲಪ್ ಆವುಟು.

2. ಎರಡ್ ಕಾಲೇಜ್ ಮಕ್ಕ ಮಾತಾಡ್ದು – ನಮ್ಮ ಹಾಸ್ಟಲ್ ತುಂಬಾ ಎಕ್ಸಲೆಂಟ್, ಸೂಪರ್ ಆಗಿ ಉಟ್ಟು, ಮೆಸ್ ಬಿಲ್ ತ್ರೀ ಹಂಡ್ರಡ್ ಆದೆ. ಎಸ್ಟಾಬ್ಲಿಷ್‌ಮೆಂಟ್, ರೂಮ್‌ರೆಂಟ್ ಎಲ್ಲಾ ಸೆಪರೇಟ್ ವಾರ್ಡನ್ ತುಂಬಾ ಸ್ಟ್ರಿಕ್ಟ್.

3. ಸಿಟ್ಟ್‌ಲಿ ನನ್ನ ರಕ್ತ ಕೊದ್ದದೆ– ನನ್ನ ಬ್ಲಡ್ ಬೊಯಿಲ್ ಆಗ್ತಾ ಉಟ್ಟು.

ಈ ರೀತಿಲಿ ನಮ್ಮ ಭಾಷೆನ ಮೇಲೆ ಇಂಗ್ಲೀಷ್ ಸವಾರಿ ಮಾಡ್ತಾ ಉಟ್ಟು.

- ಎರಡ್ನೇ ಅಪಾಯ ಮೊಬೈಲ್‌ದ್. ಅದ್ ಇದ್ದರೆ ಬೇರೆ ಏನೂ ಬೇಡ ಮೊಬೈಲ್ ಭಾಷೆ ಅಂತೂ ವಿಚಿತ್ರ. ಅದರ ಒತ್ತಿಕಂಡ್ ಕುದ್ದರೆ ಮೈಲಿ ಬೋಧನೆ ಇಲ್ಲೆ
- ಮೂರ್ನೇದ್ ನಾವ್ ಮಕ್ಕಳಿಗೆ ಅರೆಭಾಷೆ ಕಲ್ಸದೆ, ಶಿಷ್ಟ ಕನ್ನಡಲಿ ಮಾತಾಡ್ದು, ಹೀಂಗೆ ಆದರೆ ಇನ್ನೊಂದೆರಡ್ ಜನರೇಶನ್ ಕಳಿಯಕನ ಅರೆಭಾಷೆ ಕಣ್ಮರೆ ಆವ ಅಪಾಯ ಉಟ್ಟು.

ನನ್ನ ದೋಸ್ತಿ ಒಬ್ಬ ಉಟ್ಟು. ಅವರ ಮನೆಲಿ ಅಂವ ಅಂವನ ಹೆಣ್ಣ್, ಎರಡ್ ಮಕ್ಕ ನಾಲ್ಕ್ ಜನಕೂ ಅರೆಭಾಷೆ ಬಂದದೆ. ಆದರೆ ಅವರ ಮನೆಲಿ ಅವು ಮಾತಾಡಿಕಂಬದು ಕನ್ನಡಲಿ.

ನನ್ನ ದೋಸ್ತಿ ಡಾ। ಕೇನಾಜೆ ಒಂದು ಕಥೆ ಹೇಳ್ದೊ. ಇಸ್ರೇಲ್‌ಲಿ ಬೆನ್‌ಯೆಹೂದಿ ಎಂಬ ಒಬ್ಬ ಜನನಾಯಕ ಇತ್ತ್. ಅಲ್ಲಿ ಹೀಬ್ರುಭಾಷೆಗೆ ಎಂತಾ ಗತಿ ಬಾತ್‌ಂತೇಳ್ರೆ, ಬೆನ್‌ಯೆಹೂದಿ, ಅವನ ಹೆಣ್ಣ್ ಇಬ್ಬರೇ ಹೀಬ್ರು ಭಾಷೆ ಮಾತಾಡುವು ಒಳ್ದೊಗಡ. ಇಂವ ತನ್ನ ಹೆಣ್ಣ್ ಮಕ್ಕಳ ಒಂದಷ್ಟ್ ವರ್ಷ ಜನರ್‌ಂದ ದೂರ ಇಸಿ ಅವ್ಕೆ ಹೀಬ್ರು ಭಾಷೆನ ಮಾತ್ರ ಕಲ್ಸಿತ್. ಅದರ್‌ಲಿ ಪ್ರಭುತ್ವ ಸಾಧಿಸಿದ ಮೇಲೆ ಅವರ ಕರ್‌ಸಿಕಂಡು ಜನರೊಟ್ಟಿಗೆ ಹೀಬ್ರು ಭಾಷೆ ಮಾತ್ರ ಮಾತಾಡೊಕುಂತ ತಾಕೀತ್ ಮಾಡ್ತ್. ಅವು ಹೀಬ್ರು ಭಾಷೆ ಮಾತಾಡಿ ಮಾತಾಡಿ ಜನ ಕೂಡಾ ಹೀಬ್ರು ಭಾಷೆ ಮಾತಾಡಿಕೆ ಸುರುಮಾಡ್ದೊ. ಹೀಂಗೆ ಭಾಷೆನ ಬೆಳ್ಸಿ ಬೆಳ್ಸಿ ಇಂದ್ ಹೀಬ್ರು ಭಾಷೆ ಉಳ್ಕಂಡುಟ್ಟು. ಇಂದ್ ಅದ್ ಇಸ್ರೇಲ್‌ನ ರಾಷ್ಟ್ರ ಭಾಷೆ ಹಾಂಗೂ ಜನಪ್ರಿಯ ಭಾಷೆ. ಅಲ್ಲದೇ ಇಡೀ ಇಸ್ರೇಲಿ ಜನಾಂಗದ ಭಾಷೆ 'ಹೀಬ್ರು' ಆಗಿ ಬೆಳ್ದ್ ನಿತ್ತುಟು.

ಭಾಷೆಗೆ ಮಡಿವಂತಿಕೆ ಇರಿಕೆ ಬೊತ್ತು. ಅದ್ ಎಲ್ಲಾ ಭಾಷೆಗಳ ಶಬ್ದಗಳ ಸ್ವೀಕರಿಸೊಕು. ಓಕ್ಸ್ ಫರ್ಡ್‌ಡಿಕ್ಷನರಿಗೆ ಪ್ರತೀ ವರ್ಷ 25 ರ್‌ಂದ 30 ಶಬ್ದ ಸೇರ್ತಾ ಉಟ್ಟು. ಪರಿಣಾಮ ಇಂಗ್ಲೀಷ್ ಬೆಳಿಯುತ್ತಾ ಉಟ್ಟು. ಉದಾ: 'ಶರ್ಬತ್' ಎಂಬ ಶಬ್ದ ಈಗ ಕೊರ್ಸಂಡಿ, ರೈಸುದು, ಸ್ಪೀಡ್, ಬುಡೆಲ್ ಎಂಬ ಶಬ್ದಗ ಅರೆಭಾಷೆಗೆ ಸೇರಿಹೋವುಟು. ಪೆನ್, ಪೆನ್ಸಿಲ್, ಡಾಕ್ಟ್ರ, ಪೇಸ್ಟ್, ಚೆಂಡ್, ಪೋಲಿಸ್ ಕೋರ್ಟ್, ಕೇಸ್, ಕರಂಟ್, ಬಲ್ಬ್ ಪೇಪರ್ ನಮ್ಮ ಭಾಷೆ ಶಬ್ದಗ ಆಗಿ ಹೋಗೊಳೊ.

- ನಮ್ಮ ಜನಾಂಗಲಿ ತುಳು ಮತ್ತೆ ಅರೆಭಾಷೆ ಮಾತಾಡುವ ಎರಡ್ ಪ್ರಭೇಧ ಇದ್ದರೂ ಸಂಸ್ಕೃತಿ ಕಟ್ಟುವಲ್ಲಿ ಈ ಎರಡೂ ಭಾಷೆನ ಜನ ಒಂದಾಗೊಳೊ ಎಂಬ ಅಂಶನ ನಾವು ಗಮನಿಸೊಕು. ವಿಟ್ಲ, ಬಂಟ್ವಾಳ, ಪುತ್ತೂರು, ಬೆಳ್ತಂಗಡಿಲಿ ಇರುವ ನಮ್ಮ 18 ಬೊಳಿನ ಗೌಡ ಜನಾಂಗವು ಅಂದ್‌ನ ಅಲ್ಲಿನ ಪರಿಸ್ಥಿತಿ ಹಿನ್ನೆಲೆಲಿ ತುಳು ಮಾತಾಡಿರೂ, ಸಂಸ್ಕೃತಿ ಆಚರಣೆ ಸಂಪ್ರದಾಯಕ್ಕೆ ಬಾಕನ ನಾವುಗ ಅಷ್ಟ್ ಭಿನ್ನವಾಗಿ ಇಲ್ಲೆ. ಒಂದೇ ರೀತಿನ ಸಂಸ್ಕೃತಿ ಕಾಣುತ್ತಾ ಉಟ್ಟು, ಅದರ ಕಟ್ಟುವಲ್ಲಿ ಎರಡೂ ಭಾಷೆನ ನಮ್ಮ ಜನಾಂಗ ಒಂದಾಗಿ ಮುನ್ನಡ್ದಳೊ.
- ಪರಿಸ್ಥಿತಿಗೆ ಅನುಗುಣವಾಗಿ ನಾವು ಭಾಷೆನ ಹೇಂಗೆ ಕಲ್ತವೆಂತ ಹೇಳುದಕ್ಕೆ ಒಂದು ಒಳ್ಳೆ ಉದಾಹರಣೆ ಕೊಡ್ದಾದರೆ ನಮ್ಮ ಬೈಲ್‌ನ ಮಾನ್ಯ ದಿವಾಕರ ರೈ ಕುಟುಂಬದವು ಅಲ್ಲಿನ ಜಮೀನ್ದಾರರ್. ಅವರ ಮಾತೃಭಾಷೆ, ಆಡುಭಾಷೆ, ತುಳು ಅದರ್‌ಂದಾಗಿ ಅವರೊಟ್ಟಿಗೆ ಮಾತಾಡಿಕೆ ಬೇಕಾಗಿ ಒಕ್ಲುಗ ಎಲ್ಲಾ ತುಳು ಕಲ್ತೊ. ಇಂದ್ ಒಕ್ಲುಗಳ ಜನ ಸಂಖ್ಯೆ ಜಾಸ್ತಿ ಆತ್ ಅವರ ಆಡುಭಾಷೆ ಅರೆಭಾಷೆ ಆದ್ದರ್‌ಂದ ಅವರೊಟ್ಟಿಗೆ ಮಾತಾಡಿಕೆ ಬೇಕಾಗಿ ದಿವಾಕರ ರೈ ಕುಟುಂಬದವು ಅರೆಭಾಷೆ ಕಲ್ತ್ ಇಂದ್ ನಮ್ಮಂದೊಳೂ ಸೋಕು ಅರೆಭಾಷೆ ಮಾತಾಡುವೆ.
- ಅರೆಭಾಷೆಲಿ ಬರೆಯವರ್ಲಿ ನನ್ನದೊಂದು ಬೇಡಿಕೆ. ನಾವ್ ಏನಾರ್ ಬರಿಯೊಕುಂತ ಬರಿಯಕಾಗದ್. ನಮ್ಮ ಸ್ವಾರ್ಥ, ನಮ್ಮ ಪ್ರಚಾರಕ್ಕಾಗಿ ಬರಿಯಕಾಗದ್. ಎಕಾಡೆಮಿ ಧರ್ಮಕ್ಕೆ ಪ್ರಕಟಿಸಿದೆಂತ ಬರಿಯಕಾಗದ್. ಆಳವಾದ ಅಧ್ಯಯನ ಮಾಡಿ, ಜೀವನಾನುಭವದ ಹಿನ್ನೆಲೆಲಿ ಭಾಷೆ ಸಂಸ್ಕೃತಿಗೆ ಪ್ರಯೋಜನ ಆಗುವಾಂಗೆ ಬರಿಯೊಕು. ಅದರ್ಲಿ ಒಂದು ಸಾರ್ಥಕತೆನ ಪಡಿಯೊಕು. ನಾ ಅಷ್ಟ್ ಪುಸ್ತಕ ಬರ್ದೆ, ಇಷ್ಟ್ ಪುಸ್ತಕ ಬರ್ದೆಂತ ಹೇಳ್ದು ಮುಖ್ಯ ಅಲ್ಲ. ಆ ಪುಸ್ತಕದ ಗುಣಮಟ್ಟ ಹೇಂಗುಟ್ಟು ಎಂಬುದು ಮುಖ್ಯ ಆದೆ.
- ನಾವು ಅರೆಭಾಷೆ ಜನಾಂಗದವು ಮೂಲತಃ ಒಕ್ಕಲ್‌ಗ, ಆಮೇಲೆ ಹೆಚ್ಚಿನವು ಸ್ವಂತ ಬೇಸಾಯನ ಅವಲಂಬಿಸಿದೊ. ಈಗ ಈ ಬತ್ತದ ಬೇಸಾಯಂದ ವಿಮುಖರಾಗೊಳೊ. ಬತ್ತ, ತರಕಾರೀಂತ ಆಹಾರ ಬೆಳೆ ಬೆಳ್ಸುವ ಬದ್‌ಲ್ ಈಗ ಅಡಿಕೆ, ತೆಂಗು, ರಬ್ಬರ್, ಕೋಕೋ, ಗೇರುನಂತ ವಾಣಿಜ್ಯ ಬೆಳೆಗಳಿಗೆ ಮಾರು ಹೋಗೊಳೊ. ಈ ಕೃಷಿ ಪಲ್ಲಟಂದಾಗಿ ನಮ್ಮ ಸಂಸ್ಕೃತಿ ಮೇಲೆ ಅಪಾರ ಹೊಡೆತ ಬಿದ್ದುಟು. ಕೊರಳು ತುಂಬು ಸುದು ಹೊಸ್ತು, ಗದ್ದೆಗೋರಿ, ಬಿಸುಕಣಿ, ಬಲೀಂದ್ರಪೂಜೆ, ಖೆಡ್ಡಾಸ ಎಂಬ ಆಚರಣೆಗ; ನೇಗ್‌ಲ್, ನೋಂಜ, ಚುಡೊಂಕ್, ನೊರ್ಗುಳಿ, ಭತ್ತ ಮಿಜಿದು, ತಡ್ಪೆ, ಒನಲೆ, ಕಿಡಿಂಜೋಳು, ಕೂಳಿ, ಕೂಂಜೋಳು, ನೇಜಿ ಮರ್ಗಿಲ್‌ನಂತ ಶಬ್ದಗ ನಮ್ಮ ಅರೆಭಾಸೆಂದ ಕಣ್ಮರೆ ಆಗ್ತಾ ಉಟ್ಟು.
- ಭತ್ತದ ಬೇಸಾಯನ ಹೇಳಿ ನಡಿವ ಈ ಆಚರಣೆಗಳ್‌ಂದ ನಾವೆಲ್ಲಾ ಆಗಾಗ ಒಟ್ಟು ಸೇರ್ತಿದ್ದೋ, ಭಾಂದವ್ಯ ಗಟ್ಟಿ ಆತಿತ್ತ್, ಸಣ್ಣ ಪುಟ್ಟ ವೈಮನಸ್ಸ್ ತೊಲಗಿ ಹೋತಿತ್ತ್- ಇಂದ್ ನಾವು ಹೆಚ್ಚೆಚ್ಚು commercial ಆಗುತ್ತಾ ಒಳೊ.

ಒಂದು ರೀತಿ ದ್ವೀಪಗ ಆಗುತ್ತ ಒಳೊ – ನಾವು, ನಮ್ಮ ಮನೆ, ನಮ್ಮ ಮಕ್ಕ, ಶನಿವಾರ ರಾತ್ರಿ ಎಂತ ಗಮ್ಮತ್ತ್, ಆದಿತ್ಯವಾರ ಎಲ್ಲಿಗೆ ಪಿಕ್‌ನಿಕ್ ಶಾಪಿಂಗ್ ಇಷ್ಟಕ್ಕೆ ಸೀಮಿತ ಆವುಟು. ನಮ್ಮ ಹಿರಿಯರ ಜೀವನ ಪದ್ಧತಿ ಇಂದ್ ಉತ್ಸವಗಳಿಗೆ ಮಾತ್ರ ಸೀಮಿತವಾಗಿಟ್ಟು.

ಉದಾ: ಆಟಿ ಉತ್ಸವ. ಇಂದ್ ನಾವ್ 'ಆಟಲಿ ಒಂದು ದಿನ'ಂತ ಆಚರಣೆ ಮಾಡಿ ಅಂದ್ ಪತ್ರೊಡೆ. ಕಣಲೆ, ಕೆಸನ ಗೈಪು, ಆಟಿಪಾಯಸ, ತಿಮರೆ ಪೊಜ್ಜಿ, ಕುಜ್ಜೆ ಗೈಪು, ಮಾಡಿ ತಿಂದ್ ಹೋದವೆ. ಆರೋಗ್ಯಕ್ಕೆ ಪೂರಕ ಆದ ನಮ್ಮ ಹಿರಿಯರ ಆಹಾರ ಪದ್ಧತಿ ಉತ್ಸವಗಳಿಗೆ ಸೀಮಿತ ಆಗಿದ್, ಅದ್ಕೆ ಬದಲಾಗಿ ಕಬಾಬ್, ಮಂಚೂರಿ, ಟಿಕ್ಕಾ, ಬರ್ಗರ್, ಪಪ್ಸ್, ಪಿಜ್ಜಾ, ಮೆಕ್‌ಡೊನಾಲ್ಡ್‌ಗಳಿಗೆ ನಾವ್ ಬಲಿ ಬೀಳ್ತಾ ಇರ್ದು ಒಂದು ವಿಪರ್ಯಾಸನೇ ಸರಿ.

- **ವೈಚಾರಿಕವಾಗಿ ಹೇಳ್ದುಂತಾದರೆ:–** ಇಂದ್ ನಮ್ಮ ಮದುವೆ ಕಾರ್ಯಕ್ರಮಗಳ ಮೇಲೆ ವೈದಿಕ ಸಂಸ್ಕೃತಿ ಸವಾರಿ ಮಾಡ್ತಾ ಉಟ್ಟು. ಊರುಗೌಡಂಗೇ ನಮ್ಮ ಕಾರ್ಯಕ್ರಮಗಳ್‌ಲಿ ಪ್ರಾಮುಖ್ಯತೆ ಬರೋಕು. ಒಂದು ವಿಷಯ ತಿಳ್ಕಣಿ, ನಾವು ನಾಥ ಪಂಥದವು, ವೈದಿಕತನನ ಧಿಕ್ಕರಿಸಿ ಹೊರ ಬಂದವು ನಾವು ಗೌಡ ಜನಾಂಗದವು ಬ್ರಾಹ್ಮಣ್ಯನ ವಿರೋಧಿಸಿಕೆ ಬೇಕಾಗಿಯೇ 'ಊರುಗೌಡನ' ಸೃಷ್ಟಿ ಮಾಡ್ದೊ. ಅವನೇ ಇಡೀ ಕಾರ್ಯಕ್ರಮದ ರೂವಾರಿ ಪೌರೋಹಿತ್ಯದ ನೇತಾರ'. ಆಚಾರಿಗಳ್‌ಲಿ ಕೊಂಕಣಿಗಳ್‌ಲಿ, ಅವರ ಜನಾಂಗದವೇ ಪುರೋಹಿತರ್, ಮರಾಠಿಗಳ್‌ಲಿ ಗೊಂತ್‌ಗಾರ ಉಟ್ಟು, ದಲಿತರ್‌ಲಿ ಕಾಪಡಂತ ಉಟ್ಟು, ಹಾಂಗೆ ನಮ್ಮಲ್ಲಿ ಊರು ಗೌಡನೇ ಎಲ್ಲದಕ್ಕೂ ನೇತಾರ, ಅವನ ಮಾರ್ಗದರ್ಶನಲೇ ಎಲ್ಲಾ ನಡೆಯೊಕು. ವೈದಿಕ ಸಂಸ್ಕೃತಿನ ನಾವು ವಿರೋಧಿಸ್ತಾ ಇಲ್ಲೆ. ಅದರ ಬಗ್ಗೆ ನಾವ್‌ಗೆ ಗೌರವ ಉಟ್ಟು. ಆದರೆ ನಾವ್ ಮಾಡೊಕಾದ್ ನಮ್ಮ ಇತಿಹಾಸಕ್ಕೆ ಗೌರವ ಕೊಟ್ಟ್ ನಮ್ಮ ಪರಂಪರೆನ ಉಳ್ಸುವ ಕೆಲ್ಸ ಆಕು. ನಮ್ಮ ಖಾಸಗಿ ಕಾರ್ಯಕ್ರಮಗಳ್‌ಲಿ ಅರೆಭಾಷೆ ಸಂಸ್ಕೃತಿ ಉಳಿಯೊಕು.
- ನಮ್ಮಲ್ಲಿ ಈಗ ಧಾರಾಕಾರ್ಯಲಿ ಏನಾಗ್ತ ಉಟ್ಟುಂತೇಳ್ರೆ, ಕೆಲವು ಮದುವೆಗಳ್‌ಲಿ ಬ್ರಾಹ್ಮಣ ಪುರೋಹಿತರೇ ಎಲ್ಲಾ ನಿಯಂತ್ರಿಸುತ್ತಾ ಒಳೊ. ಅವರ್‌ದೇ ಒಂದು ಶೋಮನ್ ಶಿಫ್. ನಮ್ಮ ಊರು ಗೌಡ ಮೂಲೆ ಗುಂಪಾಗುತ್ತಾ ಉಟ್ಟು, ಅಪ್ಪ, ಅಮ್ಮನ ಬದ್‌ಲ್ ಪುರೋಹಿತರೇ ಮಗಳ ಧಾರೆ ಎರ್‌ದ್ ಕೊಡ್ತಾ ಒಳೊ. ಎಂತಾ ಪೇರಾಡಾಕ್ಸ್. ಈ ಬಗ್ಗೆ ನಮ್ಮ ಜನಾಂಗದವು ತುಂಬಾ ತುಂಬಾ ಯೋಚನೆ ಮಾಡೋಕು. ಈ ವೈದಿಕತನದ ಸವಾರಿಗೆ ತಡೆ ಹಾಕಲೇ ಬೇಕು. ಊರು ಗೌಡಂಗೇ ಪ್ರಾಮುಖ್ಯತೆ ಕೊಡಕು.ನಮ್ಮ ಗೌರವಾನ್ವಿತ ಊರುಗೌಡ್ರ್‌ಗ ಕೂಡಾ ಇದ್ಕೆ ಕೈ ಜೋಡ್ಸೊಕು. ಬ್ರಾಹ್ಮಣಧಾರೆ ಮಾಡುದಿದ್ದರೆ ಇಡೀ ಮದುವೆ ಕಾರ್ಯನ ಅವೇ ನಡ್ಸಲಿ. ಕಾಸ್ತಾಳಿ ಕಟ್ಟಿಕೆ ಊರುಗೌಡ ಬೇಕು, ಎಣ್ಣೆ ಅರ್‌ಶಣ, ಮಧುರಂಗಿಂದ ಹಿಡ್ದ್, ನಾಗೋಳಿ ಶಾಸ್ತ್ರ ಆಗಿ ಕಾಸ್ತಾಳಿ ಬಿಚ್ಚ್‌ಕನವರೆಗೆ ಊರು ಗೌಡ್ರ್ ಬೇಕು.

ಧಾರೆಗೆ ಮಾತ್ರ ಮಾತ್ರ ಪುರೋಹಿತರ್. ಇದರ ನೀವು ವಿರೋಧಿಸೊಕು. ವ್ಯವಸ್ಥಿತವಾಗಿ ಊರುಗೌಡ್ರ್‌ಗ ಮೂಲೆ ಪಾಲಾವ ಸಾಧ್ಯತೆ ಉಟ್ಟು. ನಿಶ್ಚಯದ ದಿನನೇ ಹೇಳಿ ಬುಡಿ, ಎಲ್ಲವೂ ಊರು ಗೌಡ್ರು ಹೇಳ್ದಾಂಗೆ ಆಕೂಂತ. ನೀವ್‌ಗೆ ಅಧಿಕೃತ ಮಾರ್ಗದರ್ಶನ ಬೇಕರೆ 'ಗೌಡರ ಸಂಸ್ಕೃತಿ ಸಿರಿ' ಕೃತಿ ರಚನೆ ಮಾಡ್ದ ಬರೆಮೇಲು ದೊಡ್ಡಣ್ಣನವರ ತಂಡವೇ ಉಟ್ಟು.

- ಇನ್ನೊಂದು ಧಾರಾಕಾರ್ಯ ಆಕನ ಎಲ್ಲವು ಮುತ್ತುದು ಅನಗತ್ಯವಾಗಿ ನೂರಾರ್ ಜನ ಮದುಮಕ್ಕಳ ಸುತ್ತ ಬಂದ್ ನಿಲ್ಲುದು. ಪಡ್ದೆ ಹೈದಗಳಿಂಗೆ ಮತ್ತೆ ಗೂಡೆಗಳಿಗೆ ಸ್ಟೇಜ್‌ಗೆ ಹೋಕೆ ಒಂದು ಅವಕಾಶ. ಕೆಳಗೆ ಸಭೆಲಿ ಕುದ್ದವ್ಕೆ ಏನೂ ಕಾಂಬಕಿಲೆ. ಈ ಮುತ್ತಿಗೆ ಹಾಕವರ ಬೆನ್ನ್ ಮಾತ್ರ ನೋಡಿಕೆ ಆದು. ಮೊದುಮಂಜನ ಕಡೆಂದ ಒಂದು 8 ಜನ, ಮೊದುಳಿಗೆನ ಕಡೆಂದ ಒಂದು 8 ಜನ ಮಾತ್ರ ವೇದಿಕೆಗೆ ಹೋಗಿ ಕೆಳಗೆ ಸಭೆಲಿ ಕುದ್ದ ಎಲ್ಲವ್ಕೆ ಕಾಂಬ ಹಾಂಗೆ ಈ ಧಾರಾಕಾರ್ಯಕ್ರಮ ನಡ್ಸುವಾಂಗೆ ನಮ್ಮ ಸಮಾರಂಭ ಸಂಘಟಕರ್ ಚಿಂತನೆ ಮಾಡ್ರೆ ಒಳ್ಳೆದ್.
- ಇನ್ನೊಂದು ವಿಚಾರ ಪೋಟೊದವು ಮತ್ತು ವೀಡಿಯೋದವು ಸಭೆಗೆ ಬೆನ್ನ್ ಹಾಕಿ ಅಡ್ಡ ನಿಲ್ಲುದು. ಕನಿಷ್ಠ 4–5 ಜನ ಇವು ಇದ್ದ್, ವೇದಿಕೆಲಿ ಇರುವ ಮೊದುಮಕ್ಕ ಏನೇನೂ ಕಾಂಬಕಿಲೆ, ಯಾರ್ ವಿಶ್ ಮಾಡುವೆಂತ ಗೊತ್ತಾದುಲೆ. ಈ ಪೋಟೊದವ್ಕೆ ಒಂದು ಕರೇಲಿ ಅಥವಾ ಸ್ಟೇಜ್‌ಂದ ಕೆಳಗೆ ಅವಕಾಶ ಮಾಡಿಕೊಟ್ರೆ ಒಳ್ಳೆದ್. ಪೋಟೊಕ್ಕಾಗಿ ಮದುವೆ ಕಾರ್ಯಕ್ರಮನ ದೀರ್ಘ ಎಳಿದು ಕೂಡಾ ಆಗುತ್ತಾ ಉಟ್ಟು. ಪೋಟೊದವರ ಬಗ್ಗೆ ನಂಗೆ ಸಿಟ್ಟಿಲ್ಲೆ, ಆದರೆ ಕಾರ್ಯಕ್ರಮ ಸುಸೂತ್ರವಾಗಿ ಸಮಯಕ್ಕೆ ಸರಿಯಾಗಿ ನಡೆಯೊಕು ಎಂಬ ಕಾಳಜಿಂದ ನಾ ಈ ವಿಷಯ ಪ್ರಸ್ತಾಪಿಸೊಳೆ ಯೋಚಿಸಿ ನೋಡಿ.
- ಇನ್ನು ಸಾವು, ಶವಸಂಸ್ಕಾರ, ಬೊಜ್ಜಲಿ ಒಂದಷ್ಟ್ ಅಮಾನವೀಯ ಸಂಪ್ರದಾಯಗಳ ನಾವು ಗುಣಾತ್ಮಕ ಬದಲಾವಣೆ ಮಾಡಿಕಂಬದು ಒಳ್ಳೆದು. ಗಂಡ ಸಾಯಕನ ಹೆಣ್ಣ್‌ನ ಬಳೆನ ಸೋದರದವು ಹೆಣದ ಮೇಲೆ ಕೈ ಇಸಿ ಒಡಿದು, ಮೂಕುತಿ, ಬೆಂಡ್ ಎಲ್ಲಾ ತೆಗಿಯುವ ಒಂದು ಅಮಾನವೀಯ ಕ್ರಿಯೆ. ಇತ್ತೀಚೆಗೆ ಇದ್ ಸ್ವಲ್ಪ ಕಡಿಮೆ ಆದರೂ ಕೆಲವು ಕಡೆ ನಡೆಯುತ್ತಾ ಉಟ್ಟು. ಇದರ ಪೂರ್ತಿ ನಿಷೇಧ ಮಾಡ್ದು ಒಳ್ಳೆದ್. ವಿಧವೆಗಳ ಅಮಂಗಲೆಯರುಂತ ಪರಿಗಣ್ಸಿ ಅವರ ಮಂಗಲ ಕಾರ್ಯಂದ ಹೊರಗಿಸುದು ಮೇಲ್ಕಟ್ ಅಡಿಗೆ ಬಾಕೆ ಬೊತ್ತು. ಅಲಂಕಾರ, ಆಭರಣ ಧರಿಸುದು, ಬೊಟ್ಟು ಹಾಕುದರ ಬಗ್ಗೆ ಕೂಡಾ ಅವ್ಕೆ ಸ್ವಲ್ಪ ಸ್ವಾತಂತ್ರ ಕೊಡ್ದು ಒಳ್ಳೆದ್. ಇಲ್ಲಿ ಒಂದಷ್ಟ್ ಗುಣಾತ್ಮಕ ಬದಲಾವಣೆ ಆಕು.
- ನಮ್ಮ ಅರೆಭಾಷಿಕರ ಮದುವೆ ಆಮಂತ್ರಣ ಪತ್ರಿಕೆಲಿ, ಈಗ ಹೇಂಗೆ ಕನ್ನಡ ಮತ್ತು ಇಂಗ್ಲೀಷ್‌ಲಿ ನಾವು ಮದುವೆ ಕಾಗದ ಮಾಡುವೆನೋ ಅದೇ ರೀತಿ ಕನ್ನಡ ಮತ್ತು ಅರೆಭಾಷೆಲಿ ಹೀಂಗೆ ಎರಡೂ ಭಾಷೆಲಿ ಮಾಡ್ರೆ ಅರೆಭಾಷೆಗೆ ಒಂದು

ಪ್ರಾಧಾನ್ಯತೆ ಕೊಟ್ಟಾಂಗೆ ಆದೆ.

- ಇನ್ನೊಂದು ಗುಂಡನ ಬಳಿನ ಗೂಡೆಗಳ ಮೊದುವೆ ಆದರೆ ಗಂಡಾಂತರ ಹೋದವೆಂತ ಇರುವ ಒಂದು ನಂಬಿಕೆ ನಮ್ಮ ಸಂಸ್ಕೃತಿನ ಒಂದು ದೊಡ್ಡ ದುರಂತ. ಗುಂಡನ ಬೊಳಿ ಗೂಡೆಗಳ ಮೊದುವೆ ಆಗಿ ಚೆನ್ನಾಗಿ ಇರುವ ನೂರಾರ್ ಕುಟುಂಬಗಳ ನಾವು ಉದಾ: ಕೊಡಕ್. ಅಂತರ್ ಜಾತಿ, ಅಂತರ್ ಧರ್ಮೀಯ ಮೊದುವೆ ಆವ ಈ ದಿನಗಳ್‌ಲಿ ಇಂತ ಒಂದು ಕುರುಡು ನಂಬಿಕೆನ ನಾವು ಮನ್ಸಂದ ಖಂಡಿತ ತೆಗ್ದ್ ಹಾಕೊಕು. ನಾವು ಎಷ್ಟ್ ಹಿಪೊಕ್ರೈಟ್ಸ್‌ಂತೇಳ್ರೆ ಗೂಡೆ ಪೊರ್ಲು ಇದ್ದರೆ, ಒಳ್ಳೆ ಉದ್ಯೋಗ ಇದ್ದರೆ, ಡೌರಿ ಕೊಟ್ಟರೆ ಅವು ಗುಂಡನ ಬೊಳಿ ಆದರೂ ಅದ್ ಪೇರ್ ಗುಂಡ, ನಮ್ಮ ಬೊಳಿಗೆ ಅದ್ ಟ್ಯಾಲಿ ಆದೆಂತ ಹೇಳುವ ನಾವು, ಅದ್ ಇಲ್ಲದಿದ್ದರೆ ಗೂಡೆ 'ಕುತ್ತಿಗುಂಡ' ಅದ್ ಆಕೇಲೆಂತ ಹೇಳಿ ಸಂಬಂಧವ ನಿರಾಕರಿಸುದು ನಡಿಯುತ್ತಾ ಉಟ್ಟು ಇದರ ಬೇರ್ ಸಹಿತ ಕಿತ್ತ್ ಹಾಕೊಕ್.
- ಇದರ್‌ಲಿ ನಾ ಕೊಡರ್ಗ್‌ನವರ ಅಭಿನಂದಿಸಿನೆ. ಅವರ ಮುದುವೆ ಕಾರ್ಯಗಳ್‌ಲಿ ಊರು ಗೌಡಂಗೆ ತುಂಬ ಪ್ರಾಮುಖ್ಯತೆ. ಅಂವ ಹೇಳ್ದಾಂಗೆ ಎಲ್ಲಾ ನಡ್ದದೆ. ಬ್ರಾಹ್ಮಣ್ಯದ ಸವಾರಿ ಇಲ್ಲೆ. ಗುಂಡನ 'ಬೊಳಿ' ಮೇಲೆ ಅಷ್ಕೆ ಯಾವುದೇ ಅಸಮಾಧಾನ ಇಲ್ಲೆ. ಸಾವು ಕಾರ್ಯಗ ಎಲ್ಲಾ ಊರಿನವರ ಪಾಲ್ಗೊಳ್ಳುವಿಕೆಂದ ಸುಸೂತ್ರವಾಗಿ ನಡ್ದದೆ.
- ಇನ್ನೊಂದು ವಿಷಯ ಇದ್ ನನ್ನ ವೈಯಕ್ತಿಕ ಅಭಿಪ್ರಾಯ– ಸ್ವೀಕರಿಸುದು ಬುಡ್ದು ನೀವ್‌ಗೆ ಬುಟ್ಟದ್ - ನೀವ್‌ಗೆ ಇಷ್ಟ ಆಗದಿದ್ದರೆ ಮರ್ತ್ ಬುಡಿ.ದೈವಸ್ಥಾನ ಅಥವಾ ಭೂತಸ್ಥಾನಲಿ ವೈದಿಕ ಸಂಸ್ಕೃತಿನ ಆರ್ವಾಡ್. ದೈವಾರಾಧನೆ/ ಭೂತಾರಾಧನೆ ನಮ್ಮ ಶೂದ್ರರಲ್ಲಿರುವ ಆರಾಧನಾ ಪದ್ಧತಿ. ಅದ್ಕೆ ಸಂಬಂಧ ಪಟ್ಟಾಂಗೆ ನಮ್ಮಲ್ಲಿ ಪೂಜಾರಿಗ ಒಳೊ, ಗುರಿಕಾರ್‌ಗ ಒಳೊ ಕೋಲ್‌ಕಾರ್‌ಗ ಒಳೊ. ಮೊಡ್ಯೊಳರ್ ಒಳೊ, ಊರ್ ಕಟ್ಟ್‌ನ/ ಕುಟುಂಬ ಚೌಕಟ್ಟ್‌ನ ಪರಿಕಲ್ಪನೆಲಿ ಸರಳ, ಮಿತವ್ಯಯದ, ಹಿತವಾಗಿ ಅರ್ಥಪೂರ್ಣವಾಗಿ ದೈವಕ್ರಿಯೆಗ ನಡಿತಿತ್ತ್. ಹೆಚ್ಚಾಗಿ ಅಸುರ ಕ್ರಿಯೆಲಿ ಆರಾಧನೆ ನಡ್ದ್ ಕೋಳಿ, ಹಂದಿನ ಬಲಿಕೊಟ್ಟವೆ.ಇಂತಹ ಆರಾಧನಾ ಪ್ರಕ್ರಿಯೆಗೆ ಬ್ರಹ್ಮಕಲಶೋತ್ಸವ ತಂತ್ರಿಗ ಏಕೆ ಎಂಬ ಒಂದು ಚಿಂತನೆ ಮಾಡುವ ಬಗ್ಗೆ ನೀವ್‌ಗೆ ಒಂದು ಸಣ್ಣ ಸಲಹೆ ತೀರ್ಮಾನ - ನೀವ್‌ಗೆ ಬುಟ್ಟದ್ ಇದ್ ಒಂದು ರೀತಿನ ಸ್ಥಿತ್ಯಂತರ - ಇತಿಹಾಸಲಿ, ಪರಂಪರೆಲಿ ಇದ್ ಇಲ್ಲೆ. ಹಾಂಗಿರ್‌ಕನ ಇಂದ್ ನಾವು ಭಾರಿ ಅದ್ದೂರಿಲಿ, ಸಾವಿರಾರ್ ಜನ ಸೇರ್ಸಿ, ಭರ್ಜರಿ ಊಟ ಕೊಟ್ಟು ಏನೊ ಅಲಂಕಾರ ಮಾಡಿ, ಶಾಮಿಯಾನ ಎಲ್ಲಾ ಹಾಕಿ, ಲಕ್ಷಗಟ್ಲೆ ಖರ್ಚ್ ಮಾಡಿ ಈ ಈ ಆರಾಧನಾ ಪ್ರಕ್ರಿಯೆನ ನಡ್ಸುವ ಅಗತ್ಯ ಉಟ್ಟಾ? ನಮ್ಮ ದೌರ್ಬಲ್ಯಗಳ ಉಳ್ದವು ದುರುಪಯೋಗ ಪಡ್ಸದಾಂಗೆ ನಾವು ಜಾಗ್ರತೆ ವಹಿಸೊಕು. ಬದ್‌ಲ್ ತುಂಬಾ ಸರಳವಾಗಿ, ಮಿತವ್ಯಯಲಿ, ಹಿತವಾಗಿ

ಅರ್ಥಪೂರ್ಣವಾಗಿ ನಡ್ಸಿರೆ ಒಳ್ಳದಲ್ಲಾ ಎಂಬ ವಿಚಾರನ ನಿಮ್ಮ ಚಿಂತನೆಗೆ ಬುಡುತ್ತಾ ಒಳೆ. ನನ್ನದ್ ಅಧಿಕ ಪ್ರಸಂಗ ಆದರೆ ಕ್ಷಮಿಸಿ.

- ಅದೇ ರೀತಿ ಭಜನಾ ಮಂದಿರಗಳ್‌ಲಿ ಕೂಡಾ ನಡಿತಾ ಉಟ್ಟು. ಸ್ವಾತಂತ್ರ ಪೂರ್ವಲಿ ಸ್ವಾತಂತ್ರ್ಯ ಹೋರಾಟಕ್ಕೆ ಪೂರಕವಾಗಿ, ದೇವರ ಒಂದು ಫೋಟೊ ಇಸಿ ಊರ್‌ನ ಭಜಕರ್ ಆರಂಭ ಮಾಡ್‌ದ ಭಜನಾ ಕಾರ್ಯಕ್ರಮ ಅಂದ್ ಊರ್‌ನ ಭಜಕರಲ್ಲಿ ಒಬ್ಬ ಆರತಿ ಎತ್ತಿ ಮಂಗಲ ಹಾಡಿಕಂಡ್ ಭಜನೆ ಮಾಡುತ್ತಿದ್ದೊ. ಇಂದ್ ಅದ್ಕು ಕೂಡಾ ಬ್ರಾಹ್ಮಣ ಪೌರೋಹಿತ್ಯ ಬ್ರಹ್ಮಕಲಶ, ಪ್ರತಿಷ್ಠೆ ಎಲ್ಲಾ ಲಕ್ಷಗಟ್ಲೆ ಖರ್ಚ್‌ಮಾಡಿಕಂಡ್ ನಡ್ಸುವ ಅಗತ್ಯತೆನ ಬಗ್ಗೆ ಕೂಡಾ ಚಿಂತನೆ ಮಾಡ್ದು ಒಳ್ಳದ್‌ಂತ ನನ್ನ ಒಂದ್ ವಿನಮ್ರ ಸಲಹೆ.
- ಹೀಂಗೆ ನಮ್ಮ ಸಂಪ್ರದಾಯ ಆಚರಣೆಗಳ್‌ಲಿ ಇರುವ ಒಂದಷ್ಟ್ ಅಂಧಾನುಕರಣಗಳ ಬದಿಗೊತ್ತಿ, ಮೂಲ ಆಚರಣೆಗಳಿಗೆ ಧಕ್ಕೆ ಭಾರದಾಂಗೆ ಬದಲಾವಣೆಗಳ ಮಾಡುವ ಬಗ್ಗೆ ಅನುಭವಿ ಹಿರಿಯರೊಟ್ಟಿಗೆ ಚರ್ಚಿಸಿ ಒಂದು ಸರಳವಾದ ಏಕರೂಪದ ಆಚರಣಾ ಪದ್ಧತಿ ತಂದರೆ ಒಳ್ಳದ್‌ಂತ ನನ್ನ ನಮ್ರ ಸಲಹೆ.
- ಇನ್ನೊಂದು ವಿಚಾರ – ಹಿಂದೆ ನಮ್ಮ ಸಂಸ್ಕೃತಿಲಿ ಪಂಚಾತಿಕೆ ಮೂಲಕ, ಸಮಸ್ಯೆಗಳ ವ್ಯಾಜ್ಯಗಳ, ಪೆಟ್ಟು ಗುಟ್ಟುಗಳ ಪರಿಹರಿಸಿಕಂಬ ವ್ಯವಸ್ಥೆ ಇತ್ತ್. ಒಂದು ರೀತಿಲಿ ಇದ್ ಇಂದ್‌ನ ಗ್ರಾಮ ಸ್ವರಾಜ್ಯದ ಪರಿಕಲ್ಪನೆ. ಪರಿಣಾಮ ಜಗಳ, ಘರ್ಷಣೆ, ವೈಮನಸೆಲ್ಲಾ ಪರಿಹಾರ ಆಗಿ ಬಾಂಧವ್ಯ ಹಾಂಗೆ ಉಳಿಯುತಿತ್ತ್ ಪೋಲಿಸ್ ಸ್ಟೇಷನ್, ಕೋರ್ಟ್ ಮತ್ತೆ ಆಸ್ಪತ್ರೆಗಳ್‌ಲಿ ನಾವು ಜನಜಂಗುಳಿ ಕಂಡವೆ. ಎಲ್ಲಿ ಜನ ಇರಿಕಾಗದೊ ಅಲ್ಲಿ ಜನ ತುಂಬುತ್ತಾ ಒಳೊ. ಇದರ್‌ಂದಾಗಿ ಜನರಲ್ಲಿ ಮಾನಸಿಕ ಒತ್ತಡ, ಖಿನ್ನತೆ, ಮುಂಗೋಪ ಜಾಸ್ತಿ ಆಗುತ್ತಾ ಇರುದರ ನಾವು ಸೂಕ್ಷ್ಮವಾಗಿ ಗಮನಿಸಕ್. ಆದ್ದರ್‌ಂದ ನಾ ಹೇಳ್ದು ಹಿಂದೆ ಇದ್ದ ಪಂಚಾತಿಗೆ ವ್ಯವಸ್ಥೆ ಸಾಧ್ಯ ಆದರೆ ಒಳ್ಳದ್.
- ನಮ್ಮ ಅರೆಭಾಷೆ ಜನಾಂಗದ ಶೈಕ್ಷಣಿಕ ಪ್ರಗತಿ ಬಗ್ಗೆ ಮಾತಾಡ್ರೆ ಅದ್ ತುಂಬಾ ತೃಪ್ತಿಕರವಾಗುಟ್ಟು. ನಮ್ಮ ಮಕ್ಕಳ ಶೈಕ್ಷಣಿಕ ಬೆಳವಣಿಗೆ ತುಂಬಾ ಸ್ಪೀಡಾಗಿ ಉಟ್ಟು. ಎರಡ್ ತಲೆ ಮಾರ್‌ಗಳ ಹಿಂದೆ ನಮ್ಮ ಹಿರಿಯರ್ ಹೆಬ್ಬೆಟ್ಟ್ ಹಾಕ್ತಿದ್ದೊ, ನಮ್ಮ ಅಪ್ಪಂದರ ಕಾಲಕ್ಕೆ ಬಾಕನ ಅವು ಎಂಟನೆನೂ, ಹತ್ತ್‌ನೇನೋ, ಕಲ್ತಿದ್ದೊ. ಇಂದ್ ನಮ್ಮ ಮಕ್ಕ ಪದವಿ, ಸ್ನಾತಕೋತ್ತರ ಪದವಿ, ಮೆಡಿಕಲ್, ಇಂಜಿನಿಯರಿಂಗ್ ಮುಂತಾದ ಪದವಿಗಳಿಸುತ್ತಾ ಒಳೊ. ಮುಂದುವರ್ದ ಜನಾಂಗಕ್ಕೆ ಸರಿ ಸಮಾನಗಿ ನಿತ್ತ್ ಡಿಸ್ಟಿಂಕ್ಷನ್ ರ‍್ಯಾಂಕ್ ಪಡಿತಾ ಇರ್ದು ಸ್ವಾಗತಾರ್ಹ ಬೆಳವಣಿಗೆ.
- ಐ.ಎ.ಎಸ್, ಐ.ಪಿ.ಎಸ್. ಮಾಡಿಕಾಗದಿದ್ದರೂ ಅಧಿಕಾರಿಗಳಾಗಿ, ಉಪನ್ಯಾಸಕರಾಗಿ, ಬ್ಯಾಂಕ್ ಮ್ಯಾನೇಜರ್‌ಗಳಾಗಿ, ಮಾಸ್ಟ್ರಗ್ಳಾಗಿ, ಇಂಜಿನಿಯರ್‌ಗಳಾಗಿ, ಚಾರ್ಟೆಡ್ ಎಕೌಂಟೆಟ್‌ಗಳಾಗಿ, ಡಾಕ್ಟ್ರಗಳಾಗಿ ನೆಲೆ ಕಂಡುಕೊಂಡೊಳೊ. ನಮ್ಮ ಜನಾಂಗದ ಹೆಣ್ಮಕ್ಕ ಕೂಡಾ ಒಳ್ಳೆ ಉದ್ಯೋಗಲಿ ಒಳೊ. ಅರೆಭಾಷೆ ಮಾತಾಡುವ ಎಂ.ಎಸ್.

ಓಂ ಪ್ರಕಾಶ್ ನಂತವು ಅಮೇರಿಕಾದ ಕಾರ್ನೆಲ್ ವಿಶ್ವವಿದ್ಯಾನಿಲಯದ ಎಂ.ಎಸ್. ಪದವಿ ಪಡ್ಕೊಂಡಳೊ. ಗುಡ್ಡೆಮನೆ ರಾಘವನವು ವಿಜ್ಞಾನಿ ಆಗೊಳೊ. ಕೆ.ಎಸ್. ಆನಂದನವು ಸ್ವಂತ ಸಾಫ್ಟ್‌ವೇರ್ ಉದ್ಯಮ ಸ್ಥಾಪಿಸೊಳೊ, ಏಳೆಂಟು ಸಾಫ್ಟ್‌ವೇರ್ ಕಂಪೆನಿಗಳಿಗೆ ಮಾರ್ಗದರ್ಶಕರಾಗಿ ಒಳೊ.

ವೈದ್ಯಕೀಯ ಕ್ಷೇತ್ರ ತಕಂಡ್ರೆ, ಆಲೋಪತಿಕ್ ವಿಭಾಗಲಿ ಡಾ। ಕೆ.ವಿ. ಚಿದಾನಂದ, ಡಾ। ಹಿಮಕರ, ಡಾ। ಕರುಣಾಕರ ಕ್ಯೊಂಗಾಜೆ, ಡಾ। ಸಾಯಿಗೀತ, ಡಾ। ಶ್ರೀಧರ ಮುರುಳ್ಯ, ಡಾ। ರಕ್ಷಿತ್ ಕೆದಂಬಾಡಿ, ಡಾ।ಪವನ್ ಮಾಣಿಬೆಟ್ಟು, ಡಾ। ಕಾರ್ತಿಕ್ ಕತ್ಲಡ್ಕ, ಡಾ। ಸ್ವಸ್ತಿಕ್ ಕತ್ಲಡ್ಕ, ಡಾ। ನವೀನ್ ನೆರಿಯನ, ಡಾ। ನವೀನ್ ದಂಬೆಕೋಡಿ, ಡಾ। ಚಿತ್ರಾ ನವೀನ್, ಡಾ। ಅಕ್ಷಯ್ ಕುದ್ವಾಜೆ, ಡಾ। ಕಲ್ಪನಾ ಶ್ರೀಧರ, ಡಾ। ಕಲ್ಪನಾ, ಡಾ। ತಾರಾನಂದನ್,ಡಾ। ಸುಬ್ರಹ್ಮಣ್ಯ, ಡಾ। ರಂಜಿತ್, ಡಾ। ದಿನೇಶ್, ಡಾ। ನಮ್ರತಾ, ಡಾ। ರಮ್ಯ, ಡಾ। ಸೃಜನ ಮಡಪ್ಪಾಡಿ, ಡಾ। ವಿಂದ್ಯಾ; ಆಯುರ್ವೇದಿಕ್ ವೈದ್ಯಕೀಯ ಕ್ಷೇತ್ರಲಿ ಡಾ। ಲೀಲಾಧರ, ಡಾ। ಪುರುಷೋತ್ತಮ, ಡಾ। ಬಿ.ಎಂ. ಕವಿತಾ, ಡಾ। ಹರ್ಷವರ್ಧನ್, ಡಾ। ಲಕ್ಷ್ಮೀಶ, ದಂತ ವೈದ್ಯಕೀಯ ಕ್ಷೇತ್ರಲಿ ಡಾ। ಕಿರಣ್, ಡಾ। ಜಯದೀಪ್, ಡಾ। ಪ್ರಸನ್ನ, ಡಾ। ರೇವಂತ್ ಸೂಂತೋಡು– ಇವೆಲ್ಲಾ ನಮ್ಮ ಅರೆಭಾಷಿಕದಲ್ಲಿ ತಜ್ಞ ಡಾಕ್ಟರ್‌ಗಳಾಗಿ ವೈದ್ಯಕೀಯ ಕ್ಷೇತ್ರಲಿ ಮಿಂಚುತ್ತಾ ಇದ್ದುದು ನಾವ್‌ಗೆಲ್ಲಾ ಹೆಮ್ಮೆಯ ಸಂಗತಿ.

- ಪೂಜ್ಯ ಕುರುಂಜಿ ವೆಂಕಟ್ರಮಣ ಗೌಡ್ರ್‌ಂದ ಸ್ಥಾಪನೆಗೊಂಡ ಪ್ರಸ್ತುತ ಡಾ। ಕೆ.ವಿ ಚಿದಾನಂದ ಮತ್ತೆ ಡಾ। ಕೆ.ವಿ. ರೇಣುಕಾಪ್ರಸಾದರ ನೇತೃತ್ವಲಿ ನಡೆವ ಶಿಕ್ಷಣ ಸಂಸ್ಥೆಗ ಸುಳ್ಯಕ್ಕೆ ರಾಷ್ಟ್ರಮಟ್ಟಲಿ ಮಾತ್ರ ಅಲ್ಲ ಅಂತರಾಷ್ಟ್ರೀಯ ಮಟ್ಟಲಿ ಕೂಡಾ ಕೀರ್ತಿ ತಂದ್ ಕೊಟ್ಟುಟು. ಎಂ.ಪಿ. ಉಮೇಶರ ನೇತೃತ್ವಲಿ ನಡೆವ ಕೇಂದ್ರಿಯ ಸಿಲೆಬಸ್‌ನ ಜ್ಞಾನಗಂಗಾ ಪಬ್ಲಿಕ್ ಸ್ಕೂಲ್; ದ.ಕ. ಗೌಡ ವಿದ್ಯಾ ಸಂಘದ ಆಶ್ರಯಲಿ ಕೆ.ವಿ.ಜಿಯವರ್‌ಂದ ಸ್ಥಾಪನೆಗೊಂಡ್ ಪ್ರಸ್ತುತ ಧನಂಜಯ ಅಡ್ಪಂಗಾಯರ ಅಧ್ಯಕ್ಷತೆಲಿ ನಡೆವ ಶ್ರೀ ಶಾರದಾ ಹೆಣ್ಮಕ್ಕಳ ಶಿಕ್ಷಣ ಸಂಸ್ಥೆಗ ಕೂಡಾ ಅರೆಭಾಷಿಗರ ಸಾಧನೆಗೆ ಗರಿ ಮೂಡಿಸಿಟು.

**ನಮ್ಮ ಬೇಡಿಕೆಗ:**

- **ಭಾಷಾ ಅಲ್ಪ ಸಂಖ್ಯಾತರ ಸ್ಥಾನಮಾನ** - ತುಳು, ಕೊಂಕಣಿ ಮಾತಾಡ್‌ವ್‌ಕೆ ಭಾಷಾ ಅಲ್ಪ ಸಂಖ್ಯಾತರ ಸ್ಥಾನಮಾನ ಕೊಟ್ಟೊಳೊ. ಆದ್ದರ್‌ಂದ ಸುಮಾರು 5 ಲಕ್ಷ ಜನ ಮಾತಾಡುವ ನಮ್ಮ ಅರೆಭಾಷೆಗೆ ಕೂಡಾ ಭಾಷಾ ಅಲ್ಪ ಸಂಖ್ಯಾತರ ಸ್ಥಾನಮಾನನ ಕೊಡುಕೂಂತ ನಾ ಸರಕಾರನ ಈ ವೇದಿಕೆ ಮುಖಾಂತರ ಭಿನ್ನವಿಸಿಕಣೆ. ಈ ಬಗ್ಗೆ ನಾವು ಒಂದಷ್ಟ್ ಪ್ರಯತ್ನನೂ ಮಾಡೊಕಾದೆ. ಅದ್ ನಾವ್‌ಗೆ ಮಂಜೂರಾದರೆ ನಾವು ಅರೆಭಾಷಿಕ ಅರ್ಧಂದ ಹೆಚ್ಚು ಮಕ್ಕ ಇರುವ ಎಲ್ಲಾ ಅನುದಾನಿತ ಹಾಂಗೂ ಅನುದಾನ ರಹಿತ ಶಾಲೆಗಳಿಗೆ ಇದರ್‌ಂದ ಖಂಡಿತಾ ಪ್ರಯೋಜನ ಆದು. ಜೊತೆಗೆ ಸಿ.ಇ.ಟಿ. ಲಿ ಕೂಡ ಒಂದಷ್ಟ್ ಮೀಸಲಾತಿ

ನಮ್ಮ ಮಕ್ಕಳಿಗೆ ಸಿಗುವ ಅವಕಾಶ ಉಟ್ಟು. ನಮ್ಮ ಮಕ್ಕಳ ಶಾಲೆಗೆ ಸೇರ್ಸ್‌ಕನ, ಅರ್ಜಿಲಿ ಮಾತೃಭಾಷೆಂತ ಒಂದು ಕಲವ್ ಉಟ್ಟು, ಅಲ್ಲಿ ನಾವು ಅರೆಭಾಷೆಂತೇಳಿಯೇ ನಮೂದಿಸೊಕು. ಈ ಬಗ್ಗೆ ನಮ್ಮ ಪ್ರಯತ್ನ ಸಾಗಲೀಂತ ನನ್ನ ಆಶಯ.

- **ಮಂಗಳೂರು ವಿಶ್ವವಿದ್ಯಾಲಯಲಿ ಅರೆಭಾಷೆ ಅಧ್ಯಯನ ಪೀಠ ಸ್ಥಾಪನೆ-** ಈಗಲೇ ನಮ್ಮ ಅರೆಭಾಷೆ ಸಾಹಿತ್ಯ ಮತ್ತು ಸಂಸ್ಕೃತಿಗಳ ಬಗ್ಗೆ ಸಾಕಷ್ಟ್ ಸಂಶೋಧನಾ ಕೃತಿಗ, ಲೇಖನಗ, ಪದಕೋಶ, ಸಾಹಿತ್ಯಗ ಅರೆಭಾಷೆಲಿ ಬಂದುಟು. ಕೋಡಿಯವರ್‌ಂದ ಹಿಡ್ದ್, ಚಿನ್ನಪ್ಪಗೌಡ್ರ್, ಬಿಳಿಮಲೆ, ಕಣಿಯೂರು ನಂತವು ನಮ್ಮ ಸಂಸ್ಕೃತಿ ಮೇಲೆ ಸಂಶೋಧನೆ ಮಾಡ್ಯೊಳೊ. ಈ ಹಿನ್ನೆಲೆಲಿ ನಮ್ಮ ಭಾಷೆನ ಹಿತದೃಷ್ಠಿಲಿ, ಸ್ವಾತಂತ್ರ್ಯ ಸಂಗ್ರಾಮಲಿ ಕೂಡಾ ಪಾಲ್ಗೊಂಡ ಈ ಭಾಷೆ ಮಾತ್ನಾಡುವ ಜನಾಂಗದ ಹಿತ ದೃಷ್ಠಿಲಿ ನಮ್ಮ ಮಂಗಳೂರು ವಿಶ್ವ ವಿದ್ಯಾನಿಲಯಲಿ ಒಂದು ಅಧ್ಯಯನ ಪೀಠ ಆಕು. ನಾವು ಈ ಬಗ್ಗೆ ಪ್ರಯತ್ನ ಮಾಡ್ದು ಒಳ್ಳದ್. ಈಗಾಗ್ಲೆ ತುಳು, ಕೊಂಕಣಿ, ಬ್ಯಾರಿ ಭಾಷೆಗೆ ಅಧ್ಯಯನ ಪೀಠ ಉಟ್ಟು, ಆದ್ದರ್‌ಂದ ನಾವು ಪ್ರಯುತ್ನ ಪಟ್ಟರೆ ಇದ್ ಸಾಧ್ಯತೆ ಉಟ್ಟು.
- **ಸಂವಿಧಾನದ 8ನೇ ಪರಿಚ್ಛೇದಕ್ಕೆ ಅರೆಭಾಷೆ** - ಒಂದು ಪ್ರಾದೇಶಿಕ ಭಾಷೆ ಆಗಿ ಒಂದು ಜನಾಂಗದ ಭಾಷೆಗೂ ಮಹತ್ವ ನೀಡಿ ನಮ್ಮ ಸಂವಿಧಾನದ 8ನೇ ಪರಿಚ್ಛೇದಲಿ ಸೇರ್ಸಿಕೆ ನಾವು ಪ್ರಯತ್ನ ಪಟ್ಟರೆ ನಮ್ಮ ಭಾಷೆಗೆ ಒಂದು ಗೌರವದ ಸ್ಥಾನಮಾನ ಬಂದದೆ. 25-30 ವರ್ಷಗಳ ಹಿಂದೆ ನಮ್ಮ ಅರೆಭಾಷೆಗೆ ಒಂದು ಎಕಾಡೆಮಿ ಬೇಕೂಂತ ಹೇಳ್‌ತಿದ್ದರೆ ಜನ ನಗಾಡ್ತಿದ್ದೋನೊ ಏನೊ? ಸುಳ್ಯದ ಒಬ್ಬ ಹೈದ ನಮ್ಮ ಮುಖ್ಯಮಂತ್ರಿ ಆದುಂತ ಯಾರ್ ಗ್ರೇಸಿಲೊ? ಈಗ ಆತ್‌ಲೆನಾ? ನಮ್ಮದೇ ಒಬ್ಬ ಮುಖ್ಯಮಂತ್ರಿ ಆಗಿ ಎಕಾಡೆಮಿ ಸಿಕ್ಕಿದಾಂಗೆ ಕೇಂದ್ರಲಿ ನಮ್ಮವೇ ಒಬ್ಬ ಪ್ರಧಾನ ಮಂತ್ರಿ ಆಗಿ ನಮ್ಮ ಅರೆಭಾಷೆಗೆ ನಮ್ಮ ಸಂವಿಧಾನಲಿ ಏಕೆ ಸ್ಥಾನ ಸಿಕ್ಕಿಕಾಗದ್? 'ಕಷ್ಟ ಆದರೆ ಸಾಧ್ಯ' ಎಂಬ ನೆಲೆಲಿ ಆಶಾವಾದಿಗಳಾಗಿ ನಮ್ಮ ಪ್ರಯತ್ನ ಸಾಗೊಕು ಅಷ್ಟೆ.
- ಈಗಲೇ ಪದವಿ ಮಟ್ಟದ ಕನ್ನಡ ಪಠ್ಯ ಪುಸ್ತಕಲಿ ಅರೆಭಾಷೆ ಕವನಗ ಬಂದುಟು. ಟಿ.ಜಿ. ಮೂಡೂರು, ಕಿರಣ, ಡಾ। ನಿಡಿಂಜಿಯವರ ಕವನಗಳಿಗೆ ಆದ್ಯತೆ ಸಿಕ್ಕಿಟು. ಇದು ಸ್ವಾಗತಾರ್ಹ ಬೆಳವಣಿಗೆ. ತುಳುನ 3ನೇ ಭಾಷೆ ಆಗಿ ಕಲಿಯಕೆ ಅವಕಾಶ ಉಟ್ಟು. ಈ ಎಲ್ಲಾ ಹಿನ್ನೆನೆಲಿ ಅರೆಭಾಷೆಲಿ ಕೂಡಾ ಒಂದು ಸರ್ಟಿಫೀಕೇಟ್ ಕೋರ್ಸ್ ಅಥವಾ ಡಿಪ್ಲೊಮೋ ಕೋರ್ಸ್ ಮಾಡುವ ಬಗ್ಗೆನೂ ನಮ್ಮ ಪ್ರಯತ್ನ ನಡಿಯಕ್.
- ಅರೆಭಾಷೆ ಜನಾಂಗಕ್ಕೆ ಪ್ರತ್ಯೇಕ ಮೀಸಲಾತಿ ನೀಡುವ ಬಗ್ಗೆನೂ ನಾವು ಪ್ರಯತ್ನ ಮಾಡ್ದು ಒಳ್ಳದ್. ಈಗ '3ಎ' ಲಿ ಸಿಕ್ಕುವ ಅವಕಾಶಗ ತುಂಬಾ ಕಡಿಮೆ. ಹಿಂದೆ ಎಂ.ಆರ್. ಬಾಲಕೃಷ್ಣ ಗೌಡ್ರ ಮುತುವರ್ಜಿಲಿ ಪ್ರಯತ್ನ ಪಟ್ಟಿದ್ದೋ. ಆದರೆ

ಒಂದಷ್ಟ್ ಏಕಮನಸ್ಸ್‌ನ ಕೊರತೆಂದಾಗಿ ಇದ್ ಬಿದ್ದ್‌ಹೋತ್, ಈ ದಿಸೆಲಿ ನಮ್ಮ ಪ್ರಯತ್ನ ಮುಂದುವರಿಯಕ್. ಈಗನ 8 ಲಕ್ಷದ ಆದಾಯ ಮಿತಿ ಒಳಗಿನವ್ಕೆ ಸಿಗುವ ಮೀಸಲಾತಿ ಕೂಡಾ ನಾವ್‌ಗೆ ಏನೂ ಪ್ರಯೋಜನ ಆದುಲೇಂತ ನನ್ನ ಅನಿಸಿಕೆ. ಏಕೆಂತೇಳ್ರೆ ಬೇರೆ ಯಾವ ಮೀಸಲಾತಿ ಇದವ್ಕೆ ಮಾತ್ರ ಇದ್ ಅನ್ವಯ ಆದೆ. ಎಂಬ ಒಂದು ಟಿಪ್ಪಣಿ ಇರುದರ್‌ಂದ, ನಾವ್‌ಗೆ 3ಎ ಲಿ ಒಂದು ಮೀಸಲಾತಿ ಈಗಾಗಲೇ ಇರುದರ್‌ಂದ ಇದ್ ನಾವ್‌ಗೆ ಪ್ರಯೋಜನ ಬಾದುಲೆ.

- ಏಕಾಡೆಮಿ ಜನಮುಖಿ ಆಕು. ಸಾಮಾನ್ಯ ಜನಕ್ಕೆ ಬೇಕಾವ ಕಾರ್ಯಕ್ರಮಗ ಬರೊಕು. ಜನರ ಆಶೋತ್ತರಗಳಿಗೆ ಸ್ಪಂದಿಸೊಕು. ನಮ್ಮ ಭಾಷೆ, ಸಂಸ್ಕೃತಿನ ಆಳವಾದ ಅಧ್ಯಯನ, ಸಂಶೋಧನೆ ಮಾಡಿ ಅದ್ ಹೊರ ಬರುವಾಂಗೆ ಮಾಡೊಕು. ನಮ್ಮ ಸಿದ್ಧವೇಷ, ಕೋಲಾಟ ನೃತ್ಯ ಪ್ರಾಕಾರಗಳ ದಾಖಲಿಕರಣ ಆಕು. ಎಲ್ಯಣ್ಯ ಗೌಡ್ರ್ ಮಾಡ್ದಾಂಗೆ ಸಾಂಸ್ಕೃತಿಕ ತಂಡಗಳ ನಿರ್ಮಾಣ ಆಕು.
- ಮಡಿಕೇರಿ ಆಕಾಶವಾಣಿನ ಅಲ್ಲಿನ ಅರೆಭಾಷಿಗರು ಬಳ್ಸಿಕಂಡಾಂಗೆ ಮಂಗಳೂರು ಆಕಾಶವಾಣಿಲಿ ಕೂಡಾ ಅರೆಭಾಷೆಲಿ ವೈವಿಧ್ಯಮಯ ಕಾರ್ಯಕ್ರಮಗಳ ಕೊಡಿಕೆ ನಮ್ಮ ಏಕಾಡೆಮಿಂದ ಪ್ರಯತ್ನ ನಡ್ದರೆ ಒಳ್ಳೆದ್‌ಂತ ನನ್ನ ಬೇಡಿಕೆ.
- ಏಕಾಡೆಮಿ ಈಗಾಗಲೇ 10 ವಿದ್ವಾಂಸರಿಗೆ ಫೆಲೊಶಿಫ್ ಕೊಟ್ಟುಟು. ಅರೆಭಾಷೆ ವ್ಯಾಕರಣ ಪುಸ್ತಕ ಇಂದ್ ಬುಡಗಡೆ ಆವುಟು. ಏಕಾಡೆಮಿ ಮುಂದೆ ಇರುವ 'ಅರೆಭಾಷೆ ಸಂಸ್ಕೃತಿ ಗ್ರಾಮ, ಒಂದು ಪೊರ್ಲುನ ಪರಿಕಲ್ಪನೆ. ಅದರ್ಲೊಂದು ನಮ್ಮ ಸಂಸ್ಕೃತಿನ ಪ್ರತಿ ಬಿಂಬಿಸುವ ವಸ್ತು ಸಂಗ್ರಹಾಲಯ ಇರೊಕು. ಅದರೊಳಗೆ ನಮ್ಮ ಸಂಸ್ಕೃತಿನ ಮೆಲುಕು ಹಾಕುವಾಂಗೆ ಇರೊಕು. ಆಡಂಭರಗಳಿಗೆ ಆದ್ಯತೆ ಕೊಡದೆ ಪರಿಣಾಮಕಾರಿಯಾಗಿ ಅರ್ಥ ಪೂರ್ಣವಾದ ಕಾರ್ಯಕ್ರಮಗ ನಡ್ದ್ ಅರೆಭಾಷೆ ಬೆಳಿಯೊಕು. ನಮ್ಮ ಸಂಸ್ಕೃತಿ ಬೆಳಿಯೊಕು. ಎಲ್ಲದಕ್ಕೂ ಮೇಲ್ಪಟ್ಟ್ ನಾವು ನಮ್ಮ ದೊಡ್ಡಸ್ತಿಕೆ, ಮುಜುಗರನ ಬುಟ್ಟು ಅರೆಭಾಷೆ ಮಾತಾಡೊಕು, ಅರೆಭಾಷೆಲಿ ಮಾತಾಡ್ಲೋಕು, ಪೂಜ್ಯ ಕೆ.ವಿ.ಜಿ. ಡಾ। ಚಿದಣ್ಣ, ಡಾ। ಪ್ರಸಾದಣ್ಣ, ಪಡ್ಡಂಬೈಲು ವೆಂಕಟ್ರಮಣ ಗೌಡ್ರ್, ಎಂ.ಆರ್. ಬಾಲಕೃಷ್ಣ ಗೌಡ್ರ್, ನಿತ್ಯಾನಂದ ಮುಂಡೋಡಿ, ಡಾ। ಬಿಳಿಮಲೆಯವರಾಂಗೆ ಅಪ್ಪಟ ಅರೆಭಾಷೆಲಿ ಮಾತ್‌ನಾಡುವ ಮೂಲಕ ಹಿರಿಯರ ವಿನಮ್ರ ಸಂಸ್ಕೃತಿನ ಬಳ್ಸಿ, ಬೆಳ್ಸಿಕಂಡ್ ಬರೊಕು. ಪರಂಪರೆಯ ಜೀವಂತಿಕೆಯಿಂದ ಕೂಡಿ ಪರಂಪರೆಲಿ ಆಳವಾಗಿ ಬೇರ್ ಬುಟ್ಟ ನಮ್ಮ ಅರೆಭಾಷೆ ಜನಾಂಗ ವೃಕ್ಷ ಒಂದು ಹೆಮ್ಮರವೇ ಸರಿ. ಇಂತಹ ಜನಾಂಗ ವೃಕ್ಷದ ಬೇರ್‌ಗಳೆಲ್ಲಾ ಹಳ್ತಾದರೂ, ಇಂದ್‌ನ ಜನಾಂಗದ ಹೊಸ ಚಿಗ್‌ರಾದ ನವಚೇತನಗ ಈ ವೃಕ್ಷದ ಸೊಬಗ್‌ನ ಕೆಡಿಸಿಕಾಗದ್. ನಮ್ಮ ಜನಾಂಗದ ಜೀವಾಳನ ಅರಿತ್‌ಕಂಡ್, ಉಳ್ಸಿ, ಬೆಳ್ಸುವ ಸೊಗಸುಗಾರರಾಕು. ಆಗಲೇ ಈ ನಮ್ಮ ಭಾಷೆ ಮತ್ತು ಜನಾಂಗದ ಬೃಹತ್‌ನ ಸುರಕ್ಷೆ ಸಾಧ್ಯ. ವಿಚಾರವಿಹೀನ ಅಂಧಾನುಕರಣೆ ನಮ್ಮ ಜನಾಂಗಂದ ದೂರ ಆಕು ಆಗಲೇ ನಮ್ಮ ಅಭ್ಯುದಯ ಸಾಧ್ಯ. ಯು.ಸುಬ್ರಾಯ ಗೌಡ್ರ್,

'ವೀಳ್ಯ' ಸಂಚಿಕೆಲಿ ಬರ್ಪ ಕವನ 'ವೀಳ್ಯ'ನ ಓದುದರೊಂದಿಗೆ ನನ್ನ ಭಾಷಣನ ಮುಕ್ತಾಯ ಮಾಡ್ನೆ.

## ವೀಳ್ಯ

ಬೊಳ್ಪಾಗಿ ಎಷ್ಟ್ ಹೊತ್ತಾತ್
ಎದ್ರ್ - ಚಳಿ ಬುಟ್ಟತಿಲೆನಾ?
ಹಕ್ಕಲೆನ ಜನ ಎದ್ದ್
'ದಡದಡ' ಸದ್ದ್ ಮಾಡ್ತಾ ಒಳೊ
ನಿಂಗೆ ಕೇಳ್ದುಲೆನಾ? ಜಡ ನಿದ್ದೆ ಬುಟ್ಟತಿಲೆನಾ?
ಅವೆಲ್ಲ ಅಲ್ಲಿಗೆ, ಇವೆಲ್ಲ ದಿಲ್ಲಿಗೆ
ಉಳ್ದವು ಇನ್ನೆಲ್ಲಿಗೊ ಹೋಗಿ ಆತ್
ನೀಮಾತ್ರ ಯಾಕೆ ಇದ್ದಲ್ಲೆ ಸುಮ್ಮನೆ ಒಳ?
ಆ ಪುಣ್ಯಾತ್ಮರ್ ನಿಂಗೆಂತೇಳಿಯೆ ಕಟ್ಟಿಸೊಳೊ
ದೇವಸ್ಥಾನದ ಹಾಂಗೆ ಶಾಲೆಗಳ
ಅದರ್ಲಿ ನಿಂಗೆ ನಂಬಿಕೆ ಇಲ್ಲೆನಾ?
ನೀ ಬೇರೆಂತ ತಿಳ್ಕಂಡಳನಾ?
ನಿನ್ನ ಸಮುದ್ರಲೇ ನೀ 'ದ್ವೀಪ' ಆದರೆ ಹೇಂಗೆ?!
ನಿನ್ನ ದೀಪದ ಗುಣ ಕೆಟ್ಟತಾ?
ಸಮುದ್ರದ ನೀರೇ ಆರ್ತಾ ಹೇಂಗೆ?
ಒಮ್ಮೆ ತಲೆಎತ್ತಿ ನೋಡ್ ಸುತ್ತಮುತ್ತ
ನೆರೆಕರೆವೆಲ್ಲ ಎಷ್ಟ್ ದೂರ ಹೋಗೊಳೊ–
ನಿನ್ನ ಬಾಳ್‌ನ 'ಪೇಚಾಟ'ಲಿ ನಿಂಗೆ
'ತಿರ್ಗಿ' ಬಿದ್ದವು ಯಾರ್‌ಂತ ಗೊತ್ತುಟಾ?
ಉದಾಸೀನ, ದಡ್ಡತನ, ಕೆಡ್‌ಕ್‌ತನಗಳ
ದೂರ ಒದ್ದೋಡ್ಸಿ ನೆಲಕ್ಕೆ ಹೊಡಿ.
ಇದ್ಕೆ ನಿಂಗೆ ಅವ್‌ಕಾಸ ಬಂದುಟು–
ಹ್ಞೂಂ – ರಣ ಕಹಳೆ ಊದು
ಸ್ವರ ಏರ್ಸಿ - ರಣವೀಳ್ಯ ಕೊಡು
ನಿನ್ನ ಬೆಗ್‌ರನ ಫಲ ವುಂಡ್
ಮತ್ತೆ ಮಲ್ಗ್ - ಈಗ ಎದ್ರ್,

ನಿಮ್ಮವನೇ ಆದ
**ಕೆ. ಆರ್. ಗಂಗಾಧರ,**
ಕುರುಂಜಿ, ಅರಂತೋಡು

ಕತೆ

# ಗ್ರಾಚಾರ.....!

ಅಲ್ಲ ಸಣಪ! ಈ ಗ್ರಾಚಾರತೇಳ್ರೆ ಹಿಂಗೆನೇ ಅಲಾ... ನೋಡಿ, ನಮ್ಮ ಪುಟ್ಟ ಹೈದನ ತಕಣಿ, ಅಂವ ಮೈ ಬೊಗ್ಗ್‌ಸಿ ದುಡ್ದ್ ತಿನ್ನುವ ಪಾರ್ಟಿ. ಅಂವಂಗೆ ದನಕರ್, ನಾಯಿ, ಕೊತ್ತಿ, ಕೋಳಿ ತೇಳ್ರೆ ತುಂಬಾ ಪ್ರೀತಿ. ಅವನಕ್ಕಲೆ ಒಂದು ಜೊತೆ ಎತ್ತ್‌ಗ ಇದ್ದೊ. ಅದೇ ಅಂವಂಗೆ ಜೀವ. ಅದರ ಹೆಸ್ರ್ ಸೋಮ ಮತ್ತೆ ಬಿಡ್ಡ. ಒಳ್ಳ ಬುದ್ದಿನ ಎತ್ತ್‌ಗ ಅವು. ಹೂಡಿಕೆ ಹೋದರೆ ಮಟ ಮಟ ಮಧ್ಯಾಹ್ನದವರೆಗೆ ಹೂಡಿರು ಅವುಕೆ ಬೊಚ್ಚಿಕಿಲೆ. ಅವು ಇರಿಕೂ ಹಂಗೆ ಇದ್ದೊ. ಈ ಹೈದನೂ ಹಂಗೆ ತಿಂಬಕೆ ಮೊಡ್ದಿ, ತವುಡು, ಕಡ್ಲೆ ಹಿಂಡಿ ತೇಳಿ ಬೇಕಾದಂಗೆ ಕೊಡ್ತಿತ್ತ್.

ಹೀಂಗೆ ಬೇಸಾಯ ಮಾಡಿಕಂಡ್ ಜೀವನ ಸಾಗ್ಸಿಕಂಡ್ ಇದ್ದ ಹೈದಂಗೆ ಒಂದು ದಿನ ಮಜಲ್‌ಗದ್ದೆ ಹೂಡಿಕಂಡ್ ಇರ್ಕನ ಸೊಂಟ ಯಾಕೋ ಹಿಡ್ಕಂಡಂಗಾತ್. ಬಿಸಿರಕ್ತದ ಹೈದಂಗೆ ಸುರುಗೆ ಅದ್ ಅಷ್ಟ್ ಗೊತ್ತಾತ್ಲೆ. ಹೀಂಗೆ ಹೂಟೆ ಮುಗ್ಸಿ ಎತ್ತ್‌ಗಳ ತೊಳ್ದ್ ತೋಟಲಿ ಮೇಯಕೆ ಕಟ್ಟಿಹಾಕಿ ಮನೆಗೆ ಬೊಂದ್ ಬೊಳ್ಪುನ ಎರ್ಡ್ ತುಂಡ್ ಕಲ್ತಪ್ಪ ತಿಂದ್ ಮಲ್ಗಿದವಂಗೆ ಮಧ್ಯಾಹ್ನ ಊಟಕೆ ಎದ್ರಿಕೆ ಆದುಲೆ. ಅವ್ವ ಬೊಂದ್ "ಮಂಜ ಎದ್ದ್ ಎರ್ಡ್ ಉಣುತ" ಕರ್ದರೂ ಇಂವಂಗೆ ಸೊಂಟ ಎತ್ತಿ ಬಾದುಲೆ.

ಛೇ! ಮಂಜಂಗೆ ಹಿಂಗಾತ್ತಲೆ ಇನ್ನ್ ಏನ್ ಮಾಡ್ದುತ ಹೇಳಿ ಮಲ್ಗಿದಲ್ಲಿಗೆ ಹುಗ್ಗಿ ತಂದ್ ಕೊಟ್ಟತ್ ಅವ್ವ. ಅಲ್ಲೆ ಬೆಸೆಗೆಲಿ ಇದ್ದ ಯಾವುದೋ ಕಾಲದ ಮೊದ್ದುನ ಎಣ್ಣೆನ ಸೊಂಟ ತುಂಬ ತಿಕ್ಕಿತ್. ಹೈದಂಗೆ ಚೂರು ಒಳ್ಳದಾದಂಗೆ ಆತ್. ಹಂಗೂ ಹಿಂಗೂ ಬೊಳ್ಪಾತ್. ಅವ್ವ ಬೇಗ ಎದ್ದ್ ಕಾಫಿ ತಿಂಡಿ ಮಾಡಿರೂ ಇಂವ ಮಲ್ಗಿದಲ್ಲಿಂದ ಎದ್ದತ್ಲೆ. ಸೊಂಟ ಬೇನೆ ಒಂಚೂರು ಕಮ್ಮಿ ಆತ್ಲೆ. ಅವ್ವಂಗೆ ಈಗ ಬಿಸಿ ಏರ್ತ್. ಅಲ್ಲೆ ಒಲೆಬುಡಲಿ ಕುದ್ದಿದ್ದ ಅಪ್ಪಂಗೆ ಅವ್ವ ಹೇಳ್ತ್ "ಓ, ಇಂದನಿ ನೀವು ಆ ಕಣಿಯನಕ್ಕಲೆ ಹೋಗಿ ಒಂದು ನೂಲು ಬೊಸ್ಮ ತನ್ನಿ; ಹಾಂಗಾರ್ ಕಡಿಮೆ ಆದೇನಾತ ನೋಡಮೊತ"

ಇದರ ಕೇಳ್ದ ಅಪ್ಪ ಅಂಗಿನು ಪಂಚೆನು ಕೋಸಿ ಕೈಲಿ ಒಂದು ಚೀಲ ಹಿಡ್ದ್ ಹೊರ್ಟೆ ಬುಟ್ಟೊ. ಅಷ್ಟೊತ್ತಿಗೆ ಅವ್ವ ಒಳಗೆಂದ "ಇಂದನಿ ಬೇಗ ಹೋಗಿ ಬೊನ್ನಿ, ಬ್ರಾಂಡಿಶಾಪ್ ಎದ್ರ್ ಸತ್ತ್‌ಕಂಡ್ ಇರ್ಬೊಡಿ" ಅಂತ ಹೇಳ್ತ್. ಹೆಂಗೋ ಅಪ್ಪ ಹೋಗಿ ನೂಲು ತಂದ್ ಈ ಹೈದಂಗೆ ಕಟ್ಟಿರೂ ಇವನ ಗ್ರಾಚಾರ ಬುಟ್ಟತ್ಲೆ. ಇನ್ನ್ ಏನ್ ಮಾಡ್ದುತ್ತೇಳಿ ಮಾರನೆ ದಿನ ಸುಳ್ಯಕೆ ಆಸ್ಪತ್ರೆಗೆ ಹೋದೊ. ಹೋದಂಗೆ

ಡಾಕ್ಟ್ರ ಒಂದು ಸೂಜಿ ಕುತ್ತಿದೊ. ಮಾತ್ರೆ ಬರ್ದ್ ಕೊಟ್ಟ್ ಹೇಳ್ದೊ. "ಅದ್ ಸೊಂಟಲಿ  ನರ ಕೋಸಿಕಂಡಂಗೆ ಆದ್. ಇದ್ಕೆ ಒಂದು ತಿಂಗ ಕೆಲ್ಸಮಾಡದೆ ರೆಸ್ಟ್ ತಕೊಣೊಕು"ತ. ಇದರ ಕೇಳಿ ಇಂವನ ತಲೆಗೆ ಮರ ಬಿದ್ದಂಗೆ ಆತ್. ಹೇಂಗೆ ನಾ ಈ ವರ್ಸ ಬೇಸಾಯ ಮಾಡ್ದುತ.

ಅಂತೂ ಒಂದು ತಿಂಗ ಕೆಲ್ಸಮಾಡದೆ ಕಾಲಕಳ್ತ್. ಬೇಸಾಯ ಮಾಡುವ ಹೊತ್ತ್ ಮೀರಿ ಹೋತ್. ಹೋಗಲಿ, ಗದ್ದೆಲಿ ತರಕಾರಿ ಮಾಡಿನೆತೇಳಿ ಎತ್ತ್‌ಗಳ ಹೊಡ್ಕಂಡ್ ಚೋಡಿ ಕರೆಲಿ ಹೋಕನ ಇವನ ಸೋಮ ಎತ್ತ್ ಬೇರ್ ಸೆರೆಗೆ ಕಾಲ್ ಹಾಕಿ ಅಡ್ಡ ಬೀತ್. ಬಿದ್ದ ರಭಸಕೆ ಅದರ ನಡೆ ಮುರ್ದೇ ಹೋತ್. ಪುಟ್ಟ್ ಹೈದಂಗೆ ಬಾನ ತಲೆಕೆಳಗಾದ ಅನುಭವ. ಕಿರ್ಚಿ ಮರ್ಲ್ಸಕಂಡ್ ಮನೆಗೆ ಓಡಿ ನೆರೆಕರೆವರೆಲ್ಲ ಕರ್ಕಂಡ್ ಬಾತ್. ಬಂದ್ ನೋಡಿರೆ ಎತ್ತ್‌ನ ಕಾಲ್ ಮುರ್ದ್ ನೇತಾಡ್ದೆ. ಏನ್ ಮಾಡ್ದುತ್ತೇಳಿ ಹೇಂಗೋ ಬಂಗ ಬಂದ್ ಎತ್ತ್‌ನ ಹಟ್ಟಿಗೆ ತಕಂಡೋಗಿ ಹಾಕಿ ಆಚೆಕರೆ ಚಾಂಪನ ಕರ್ಕಂಡ್ ಬಂದ್ ಕಾಲಿಗೆ ಮೊದ್ದು ಇಸಿ ಕಟ್ಟಿದೊ. ಆದರೆ ಏನ್ ಮಾಡ್ದು ಇವನ ಗ್ರಾಚಾರ ಕಂಡದೆ ಎತ್ತ್ ಬಿದ್ದ ಎಂಟೇ ದಿನಲಿ ಸತ್ತ್ ಹೋತ್. ಪುಟ್ಟನ ಬೇಜಾರಮೊನಿ ನೋಡಿಕೆ ಬೊತ್ತ್. ಮೂರು ದಿನ ಗಂಜಿ ನೀರ್ ಮುಟ್ಟಿತ್ತೆ.

ಇನ್ನ್ ಏನ್ ಮಾಡ್ದುತ ಹೇಳಿ ಮನೆಲಿದ್ದ ದುಡ್ಡ್ ಓಡ್ಕಂಡ್ ಗಟ್ಟಕೆ ಹೋಗಿ ಒಂದು ಎತ್ತ್ ತಕಂಡ್ ಬಾತ್. ನೋಡಿರೆ ಅದ್ ಬಿಡ್ಡ ಎತ್ತ್‌ಗೆ ಒಳ್ಳ ಜೊತೆ. ಸರ್‌ನೂ ಗಟ್ಟಿ ಮುಟ್ಟುಲಿ ಉಟ್ಟು. ಬಂದ್ ಹೂಡಿಕೆ ಸುರು ಮಾಡಿರೆ ನಡೂ ಗದ್ದೆಲಿ ಮಲ್ಗಿಕೆ ಸುರುಮಾಡ್ತ್. ಇವನ ಪಿತ್ತ ನೆತ್ತಿಗೇರಿ ನಾಕ್ ಬುಟ್ಟತ್. ನೇಗಿಲ್ ಬಿಚ್ಚಿ ಹೋದ ಎತ್ತ್ ಸೀದಾ ಹೋಗಿ ತ್ಯಾಂಪಜ್ಜನ ತೋಟಕ್ಕೆ ಹುಕ್ಕತ್. ವಾರಕ್ಕೆ ಮುಂದೆ ನೆಟ್ಟ ಬಾಳೆ ಜೀವ ಹಿಡ್ದಿತ್ ಅಷ್ಟೆ. ಈ ಎತ್ತ್ ಹೋಗಿ ನಾಕ್ ಬಾಳೆನ ಎಳ್ದ್ ತೀಂತ್. ಅಲ್ಲೆ ಚಿಣೆಲಿ ಮಲ್ಗಿದ್ದ ತ್ಯಾಂಪಜ್ಜನ ಪಿತ್ತ ನೆತ್ತಿಗೇರ್ತ್. ಪುಟ್ಟನ ಗ್ರಾಚಾರಕ್ಕೆ ಅವ್ಕ ಇವ್ಕ ಸೂತುಗ. ಕೋಳಿ ವಿಸಯಲಿ ಭಾರೀ ಲಡಾಯಿ ಆಗಿತ್ತ್. ತ್ಯಾಂಪಜ್ಜ ಹಳೇ ಬೀಜದ ಸರಾಯನ ಆಗಷ್ಟೆ 2 ಗ್ಲಾಸ್ ಏರ್ಸಿತ್ತ್. ಇದೇ ಬಿಸಿಲಿ ಎತ್ತ್‌ನ ಕಾಲಿಗೆ ಕತ್ತಿ ಬೀಸಿ ಹೊಡ್ತ್. ಅದ್ ದನದ ಕಾಲಿಗೆ ಸಿಕ್ಕುದು ಬುಟ್ಟು ಅವನೇ ಸಾಂಕಿದ ಒಳ್ಳ ಹೂಂಜದ ತಲೆಗೆ ಸಿಕ್ಕಿ ಅದ್ ಅಲ್ಲೆ ಅಡ್ಡ ಬೀತ್. ಅಜ್ಜನ ಸಿಟ್ಟ್ ತಡೆಕೆ ಮೊನಿ ಬೊತ್ತ್. ಇಬ್ಬರ ಬಾಯಿಂದನೂ ಬೇಕಾದ್ ಬೇಡಾದ್ ಬಾತ್. ಕಡೆಗೆ ಪೆಟ್ಟಿಗೆ ಮುಟ್ಟ ಎತ್ತಿತ್. ಆಗ ಅಲ್ಲೆ ಇದ್ದ ನೆರೆಕರೆವು ಹೇಂಗೊ ಸಮಾಧಾನ ಮಾಡಿ ಮನೆಗೆ ಕಳ್ಸಿದೊ.

ಈ ತ್ಯಾಂಪಜ್ಜ ಬುಟ್ಟದೆನಾ? ಪೆಗ್ ಹಾಕಿದ ಬಿಸಿಲಿ ಸೀದಾ ಹೋಗಿ

ಪೊಲೀಸ್‌ಗೆ ಕೇಸ್ ಕೊಟ್ಟತ್. ಪೋಲೀಸ್ ಬಂದ್ ಇಬ್ಬರಿಗೂ ಎರ್ಡೆರ್ಡ್ ಜೋರು ಮಾಡಿ ರಾಜಿ ಮಾಡಿ ಬುಟ್ರೊ. ಇತ್ತ ತ್ಯಾಂಪಜ್ಜನ ಮನೆಲಿ ಇದ್ದ ನಿನ್ನೆನ ಹುಂಜ ಕೋಳಿ ಗೈಪುಲಿ ಪೋಲೀಸ್ ಹಂರ್ಡದೆ ಹೊಟ್ಟೆ ತುಂಬ ಉಂಡ್ ಹೋತ್. ಇವರ ಈ ಜಗಳಲಿ ಬುಟ್ಟ್ ಹೋದ ಗಟ್ಟದ ಎತ್ತ್ ನಾಪತ್ತೆ. ಪಾಪ ಪುಟ್ಟ ಹೈದ ಎತ್ತ್ ಹುಡ್ಕಂಡ್ ಊರು ತುಂಬಾ ಸಂಚಾರ ಮಾಡ್ತ್. ಅಕೇರಿಗೆ ಬಾಣೆಲಿ ದನಗಳೊಟ್ಟಿಗೆ ಮೆಯ್ತಿದ್ದ ವಿಸಯ ಗೊತ್ತಾಗಿ ಮನೆಗೆ ಹೊಡ್ಕಂಡ್ ಬಂದ್ ಹಟ್ಟಿಲಿ ಕಟ್ಟಿ ಹಾಕಿತ್. ಪಾಪ ಪುಟ್ಟ ಹೈದ. ಇನ್ನ್ ನಾಳೆ ಇಂವಂಗೆ ಯಾವ ಗ್ರಾಚಾರ ಉಟ್ಟೋ ಆ ದೇವ್ರಿಗೇ ಗೊತ್ತು.....

✍ಪ್ರಜ್ವಲ್ ಬೊಳ್ತಾಜೆ

* * * * * * *

# ರಜೆ ಮಜಾಲಿ ಕಳ್ತ್

ಡಣ ಡಣಾಂತ ಪಾತ್ರೆ ಬಿದ್ದ ಸದ್ದ್ ಅಡ್ಗೆ ಕೋಣೆಂದ ಕೇಳಿ, ಜಾಜಿ ಹಲ್ಕಿ ಬಿದ್ದ್ ಎದ್ದ್ ಹಾಸಿಗೆಲಿ ಕುದ್ದತ್. ಕೈನ ಮುಷ್ಟಿ ಮಾಡಿ, ಮುಚ್ಚಿದ ಕಣ್ಣ್‌ನ ಉಜ್ಜಿಕಂಡ್ ಎರ್ಡ್ ಅಂಗೈನ ಜೋಡ್ಸಿ, ಕಣ್ಣ್‌ನ ಎದ್ರ್ ತಂದ್, ಅವ್ವ ಹೇಳಿಕೊಟ್ಟ 'ಕರಾಗ್ರೇ ವಸತೇ ಲಕ್ಷ್ಮಿ' – ಶ್ಲೋಕನ ಹೇಳಿಕಂಡ್ ಕಣ್ಣ್ ಬುಟ್ಟ್‌ದ್ ಅಂಗೈ ನೋಡ್ತೆ. ಪಕ್ಕಲಿ ಮೊಲ್ಗಿಕಂಡಿದ್ದ ಅದರ ತಮ್ಮ ಮೋನ ಗೊರ್ಕೆ ಹೊಡ್ಯತಿತ್ತ್. ಅವ್ವ ಆಗಳೇ ಎದ್ದ್‌ದ್ ಮನೆ ಎದ್ರ್‌ನ ಬಾಕಿಲ್ ತೆಗ್ದ್ ಇಸಿದೊ. ಹೊರಗೆ ಪಳ್ಳಂಗೆ ಬೊಳ್ಪಾಗಿತ್ತ್. ಜಾಜಿ ತಮ್ಮನ ಮೈ ಹಂದಾಡ್ಸಿ,

'ಮೋನ, ಮೋನ ಎದ್ರ್ ಬೊಳ್ಪಾತ್' – ಎಂತ ಹೇಳ್ತ್. ಮೋನ ಅರ್ದ ಎಚ್ಚರಲಿ ಅದರ ಕೈನ ಕೊಡ್ಕಿ,

'ಇಂದ್ ಆೈತ್ವಾರ. ಸಾಲೆಗೆ ಹೋಕೆ ಇಲ್ಲೆ. ಪಂಞ ಹೊತ್ತ್ ಮೊಲ್ಗಿನೆ'– ಎಂತ ಹೇಳಿ, ಹೊಣ್ಕಿದ್ ಮೊಲ್ಗಿ, ಒಲ್ಲಿನ ತಲೆ ಮುಟ್ಟ ಎಳ್ಕಂಡತ್.

'ಹೌದಲ್ಲ. ಇಂದ್ ಸಾಲೆಗೆ ರಜೆ'– ಎಂತ ಮೊನ್ಸ್‌ಲೇ ಹೇಳಿಕಂಡ್, ತಿರ್ಗಿ ಮೊಲ್ಗಿಕೆ ಮೊನ್ಸಾಗದೆ ಎದ್ದ್, ಕಾಲಕ್ಕಲೆ ಇದ್ದ ಒಲ್ಲಿನ ಮೊಡ್ಚಿ ತಲೆಮೊಟ್ಟೆ ಮೇಲೆ ಇಸಿ, ಅಡ್ಗೆ ಕೋಣೆ ಬಾಕಿಲ್ ಹಕ್ಕಲೆ ನಿತ್ತ್ ಒಳಗೆ ಹಣ್ಕಿ ನೋಡ್ತೆ. ಅದರ ಅವ್ವ ಸರಸಕ್ಕ ಆಗಳೇ ಎದ್ದ್, ಅಕ್ಕಿ ಕಡ್ಡ್, ಚೊಂಬು ಪಾತ್ರತೊಳ್ದ್ ಒಳಗೆ

ತಂದಿಸಿ, ಒಲೆಗೆ ಕಿಚ್ಚಿ ಮೊಡ್ತಿದ್ದೊ. ಜಾಜಿ ಸದ್ದ್ ಮಾಡದೆ ಅಡ್ಗೆ ಕೋಣೆಲೆನ ಹಿಂದೆನ ಬಾಕಿಲ್‌ಲಿ ಇಚ್ಚೆಲಿಗೆ ಇಳ್ದ್, ಜಾಳೆ ಬುಡಕ್ಕೆ ಹೋಗಿ ಕುದ್ದ್ ಮೈನೀರ್ ಇಳ್ಸಿಕಂಡದೆ. ನೀರೆಡಿ ಕೊಟಗೆಗೆ ಹೋಗಿ ಒಂದು ಚೊಂಬು ನೀರ್ ತೆಗ್ದ್ ಮೋರೆಗೆ ಹಾಕಂಡ್, ಬಾಯಿ ಮುಕ್ಕ್ಳಿಸಿ, ಬ್ರೆಶ್‌ಗೆ ಪೇಸ್ಟ್ ಹಾಕಿ, ಹಲ್ಲುಜ್ಜಿಕೆ ಸುರು ಮಾಡ್ದೆ. ಸಾಲೆಲಿ ಕೊಟ್ಟ ಮನೆ ಲೆಕ್ಕ ಮಗ್ಗಿ ಎಲ್ಲಾ ನಿನ್ನೆನೇ ಬರ್ದ್ ಇಸಿತ್. ಕನ್ನಡ ಕೋಪಿನನೂ ಬರ್ದ್ ಆಗಿತ್ತ್. 'ಇಂದ್ ರಜೆ ಏನ್ ಮಾಡ್ದು?'- ಎಂತ ಏಚನೆ ಮಾಡಿಕಂಡ್, ಹಲ್ಲುಜ್ಜಿ, ಮೋರೆಗೆ ಪೊರ್ಮಳದ ಸಾಬಾನ್ ಹಾಕಿ ಮೋರೆ ತೊಳ್ದ್, ಕೈ ಕಾಲ್‌ನನೂ ಸಾಬಾನ್ ಹಾಕಿ ಮನಾರ ತೊಳ್ದ್, ಅಲ್ಲೇ ನೇಕೆಲಿದ್ದ ಬೈರಾಸ್‌ಲಿ ಕೈಕಾಲ್ ಮೋರೆ ಚಂಡಿ ತೆಗ್ದ್ ಇಚ್ಚೆಲಿಗೆ ಬಂದ್ ಬಸಳೆ ಚಪ್ಪರದ ಹಕ್ಕಲೆ ನಿತ್ತದೆ. ತಲೆ ಎತ್ತಿ ಮೇಲೆ ನೋಡ್ದೆ. ಪಕ್ಕಲಿದ್ದ ಬೊಪ್ಪಂಗಾಯಿ ಮರಲಿ ಎರ್ಡ್ ದೊಡ್ಡ ದೊಡ್ಡ ಬೊಪ್ಪಂಗಾಯಿಗ ಹಣ್ಣಾಗಿದ್ದೊ. ಜಾಜಿ ಕುಸಿಂದ ಅವ್ವನ ಕರ್ದ್,

'ಅವ್ವಾ, ಬೊಪ್ಪಂಗಾಯಿ ಮರಲಿ, ಎರ್ಡ್ ಬೊಪ್ಪಂಗಾಯಿಗ ಹಣ್ಣಾಗೊಳೊ' – ಎಂತ ಅವ್ವಂಗೆ ಕೇಳುವ ಹಾಂಗೆ ಕರ್ದ್ ಹೇಳ್ದೆ.

ಅಡ್ಗೆ ಕೋಣೆಲಿ ಒಲೆ ಮೇಲೆ ಕಂಚಿನ ಉರ್ಳಿ ಇಸಿದ್ ಅದ್ಕೆ ಎಂಣೆ ಹೊಯ್ಕಂಡಿದ್ದ ಸರಸಕ್ಕನ ಕೆಬಿಗೆ ಮಗ ಕರ್ದ್ ಹೇಳ್ದ ಮಾತ್ ಬೀತ್. ಮಾಡುವ ಕೆಲ್ಸನ ಅರ್ಧಲಿ ಬುಟ್ಟ್‌ದ್ ಅವ್ಕೆ ಹೋಕೆ ಆದೆನೋ? ಅವು ಇಲ್ಲಿಂದಳೇ,

'ಹಾಂ, ಬಂದೆ ಮಗಾ' – ಎಂತ ಹೇಳಿ ಅವರ ಕೆಲ್ಸನ ಮುಂದರ್ಸಿದೊ.

ಅಡಿ ದಪ್ಪ ಇದ್ದ ಕಂಚಿನ ಉರ್ಳಿಗೆ ಅರ್ಧ ಕೊಂಡೆ ಕಾಯೆಣ್ಣೆ ಹೊಯ್ದ್, ಅದ್ ಕಾಯಕಾಕನ ಅದ್ಕೆ ಎರ್ಡ್ ಮೂರ್ ಒಣ್ಗಿಲ್ ಮೆಣ್ಸ್‌ನ ಮುರ್ದ್ ಹಾಕಿ, ಐದ್ ಬೆರ್ಳ್ ಕೊಡಿಲಿ ಹಂಞ ದಾಸಿಮೆ ಹಾಕಿ ಉರ್ಳಿಗೆ ಬಾವೊಡೆ ಮುಚ್ಚಿ ಇಸಿದೊ. ದಾಸಿಮೆ ಚಟ ಪಟ ಸದ್ದ್ ಮಾಡಿ ನಿಲ್ಸಿಕಾಕನ ಬಾವೊಡೆನ ತೆಗ್ದ್, ಅದ್ಕೆ ಐದ್ ಬೆರ್ಳ್ ಕೊಡಿಲಿ ಉದ್ದ್‌ನ ಬೇಳೆನ ತೆಗ್ದ್ ಹಾಕಿದೊ. ಅದ್ ಕೆಂಪಾಕನ ತಪಲೆಲಿ ಅರ್ಧ ಗಡಿ ಕಾಯಿ ಹಾಕಿ ಕಡ್ದ್ ಇಸಿದ ಕ್ಯೊಸ್ಲಕ್ಕಿ, ಬೆಳ್ತಕ್ಕಿನ ಬಂದನ ತೆಗ್ದ್ ಉರ್ಳಿಗೆ ಹ್ಯೊದೊ. ಅಗ್ರಣೆ ಬಿದ್ದ ಬಂದ, ಚೊಂಯಿಂತೇಳಿ ಸದ್ದಾಕನ, ಕೋಣೆ ಇಡೀ ಅಗ್ರಣೆನ ಪೊರ್ಮಳ ಹೊರ್ಪತ್. ತಪಲೆನ ಒಳಗೆ ಅಡಿಪುಡೆಲಿ ಅಂಟಿದ ಒಳ್ದ ಬಂದನ ಚೀಂಟಿ ತೆಗ್ದ್, ಉರ್ಳಿಗೆ ಹಾಕಿ ಬಾವೊಡೆ ಮುಚ್ಚಿತ್.

'ಹಿಟ್ಟ್ ನಿದಾನಲಿ ಬೇಯಲಿ.' ಎಂತ ಗ್ರೇಸಿಕಂಡ್, ಕೈ ತೊಳ್ದ್ ಚೆಂಡಿನ ಸೆರ್‌ಂಗ್‌ನ ಕೊಡಿಲಿ ಒರ್ಗಿಕಂಡ್, ಒಲೆಲಿದ್ದ ಸೊಯ್ದೆನ ಪಿರ್ದ್‌ದ್ ಹೊರಗೆ ಇಸಿದೆ. ಗೆಂಡದ ಸೆಕೆಗೆ ಹಿಟ್ಟ್ ಅಡಿ ಹಿಡ್ಯಕಿಲ್ಲೇಂತ ನೆನ್ಸಿಕಂಡ್ ಅಡ್ಗೆ ಕೋಣೆಂದ

ಹೊರಗೆ ಬಂದೊ. ಅವ್ವ ಕರ್ದರೂ ಬಾರದರ ನೋಡಿ ಜಾಜಿ,

‘ಅವ್ವಾ ಬಪ್ಪಂಗಾಯಿ...’ – ಎಂತ ರಾಗ ಎಳ್ಯಕಾಕನ ಸರಸಕ್ಕ ಇಜ್ಜೆಲಿಗೆ ಇಳ್ದ್‌ದ್ ಬಸಳೆ ಚಪ್ಪರದ ಹಕ್ಕಲೆ ನಿತ್ತ್‌ಕಂಡಿದ್ದ ಜಾಜಿನ ಹಕ್ಕಲೆ ಬಂದ್,

‘ಹಾಂ, ಕಿರ್‍ಚ್‌ಬಡ. ನಂಗೆ ಮಾಡ್ವ ಕೆಲ್ಸನ ಅರ್ಧಲಿ ಬುಟ್ಟ್‌ದ್ ಬಾಕೆ ಆದೆನೋ’– ಎಂತ ಹೇಳಿ ಬಸಳೆ ಚಪ್ಪರದ ಹಕ್ಕಲೆ ಇದ್ದ ಬೊಪ್ಪಂಗಾಯಿ ಮರನ ನೋಡ್ದೊ. ಮರ ತುಂಬಾ ದೊಡ್ಡ ದೊಡ್ಡ ಬೊಪ್ಪಗಾಯಿಗ ಇದ್ದೊ. ಅದರ್‌ಲಿ ಎರ್ಡ್ ಕೆಂಪಾಗಿತ್ತ್. ಜಾಜಿ ಅವ್ವನ ನೋಡಿ,

‘ಅವ್ವಾ, ನಾ ಅದರ ಕೊಯ್ಯೋಕೋ?’– ಎಂತ ಕೇಳ್ತ್.

‘ಬೇಡ, ಬೇಡ, ನಿಂಗೆ ಗಳೆನ ಆದರ್ಸಿ ಹಿಡ್ಯಕೆ ಆಕಿಲ್ಲೆ. ನಾ ಕೊಯ್ದ್ ಕೊಟ್ಟನೆ. ನೀ ಹೆರ್ಕಿ ತಾ’ – ಎಂತ ಹೇಳಿ ಸರಸಕ್ಕ ಅಲ್ಲೇ ಚಾಳೆ ಪಕ್ಕಲಿ ಇದ್ದ ಬಿಂಬುಳಿ ಮರಕ್ಕೆ ಒರ್‍ಗಿಸಿ ಇಸಿದ್ದ ಲೆಂಕಿರಿ ಗಳೆನ ತಕಂಡ್ ಬಂದ್, ಹಣ್ಣಾದ ಬೊಪ್ಪಂಗಾಯಿನ ತೊಟ್ಟ್‌ಗೆ ಕೊಕ್ಕೆ ಸಿಕ್ಕಿಸಿ, ಬಲಂದ ಎಳ್ದೊ. ಒಂದೇ ಎಳ್ತಕ್ಕೆ ಎರ್ಡ್ ಬೊಪ್ಪಂಗಾಯಿಗ ದಡ ಬಡಾಂತ ಕೆಳಗೆ ಬಿದ್ದ್, ಉರ್‍ಳಿಕಂಡ್ ಹೋಗಿ ಕೆಳಗೆನ ಪುಡೆಲಿದ್ದ ಮರ ಮಲ್ಲಿಗೆ ದೈಯಿನ ಪುಂಡೆಲಿಗೆ ಹೊಣ್ಕಿ ನಿತ್ತತ್. ಬೊಪ್ಪಂಗಾಯಿ ಬಿದ್ದ ಸದ್ದ್‌ಗೆ ಪುಂಡೆಲ್‌ಲಿ ಕುದ್ದ್‌ಕಂಡಿದ್ದ ಒಂದು ಕುಪ್ಳು ಹಕ್ಕಿ ಹಾರಿ ಹೋತ್.

ಜಾಜಿ ಓಡಿಕಂಡ್ ಹೋಗಿ ಬೊಪ್ಪಂಗಾಯಿನ ಎರ್ಡ್‌ಕೈಲಿ ಎತ್ತಿ ಎದೆಗೆ ಆನಿಸಿಕಂಡ್ ತಂದ್ ಅಡ್ಗೆ ಕೋಣೆನ ಪಕ್ಕಲಿದ್ದ ಜಗಲಿನ ಚಿಂಟೆಲಿ ಇಸಿ, ಇನ್ನೊಂದರ ತಾಕೆ ಕೆಳಗೆ ಓಡ್ತ್.

ಸರಸಕ್ಕ ಗಳೆನ ಬಿಂಬುಳಿ ಮರಕ್ಕೆ ಒರ್‍ಗಿಸಿ ಇಸಿ ಬಂದ್ ಮಗ ತಂದ್ ಇಸಿದ ಬೊಪ್ಪಂಗಾಯಿನ ಎರ್ಡ್ ಬೆರ್‍ಳ್‌ಲಿ ಒತ್ತಿ ನೋಡ್ದೊ.

‘ಇದ್ ಗಟ್ಟಿ ಉಟ್ಟು. ಹಣ್ಣಾಕೆ ಇನ್ನ್ ಎರ್ಡ್ ದಿನ ಬೇಕ್. ಈಗಳೇ ಕೊಯ್ಯಕೆ ಹೋಗ್ಬಡ ಬಲಾ..’ ಎಂತ ಹೇಳಿ,

‘ಇಂದಾ ನೀ ಈ ಕುಂಟು ಮಾಯ್ಪುಲಿ ಮನೆ ಎದ್ರ್‌ನ ಇಜ್ಜೆಲ್ ಗುಡ್ಸು ಬಲಾ’– ಎಂತ ಹೇಳ್ದೊ, ಬಿಂಬುಳಿ ಮರಕ್ಕೆ ಒರ್‍ಗಿಸಿ ಇಸಿದ ಕುಂಟು ಮಾಯ್ಪುನ ತೋರ್‍ಸಿ, ಅವು ಅಡ್ಗೆ ಕೋಣೆಗೆ ಹೋದೊ. ಒಲೆ ಮೇಲೆ ಇಸಿದ ಹಿಟ್ಟ್‌ನ ಉರ್‍ಳಿನ ಬಾವೊಡೆ ತೆಗ್ದ್ ನೋಡ್ದೊ. ಹಿಟ್ಟ್ ನಿದಾನಲಿ ಬೆಂದಕಂಡ್, ಅಡಿಂದ ಪುಡೆಲಿ ಕರೆ ಬುಟ್ಟ್‌ಕಂಡ್ ಬಾತಿತ್ತ್. ನೊಡಲಿ ಹಸಿ ಹಿಟ್ಟ್‌ಲೆ ಮೇಲೆ ಅಗ್ರಣೆ ಎಣ್ಣೆ ನೆಡ್ದ್ ಕಂಡ್ ಇತ್ತ್. ಸರಸಕ್ಕ ಕುಸಿಂದ, ಇನ್ ಮೇಲ್ಪುಡೆ ಬೇಯಕೆ, ಮೇಲೆಂದ ಗೆಂಡ ಹಾಕಿ ಇಸೊಕೂಂತ ಗ್ರೇಸಿಕಂಡ್, ಗೆಂಡದಿಟ್ಟ್‌ಗೆಂತ ಮಾಡಿಸಿದ

ಡೊಬ್ಬಿನ ತಗಡ್‌ನ ಕೊಟಗೆಂದ ತಂದ್, ಅದರ ಉರ್ಳಿಗೆ ಮುಚ್ಚಿ, ಅದರ ಮೇಲೆ ಒಲೆಲಿದ್ದ ಗೆಂಡಗಳ ಕಬ್ಬಿಣದ ಹಿಟ್ಟ್‌ನ ಸಟ್ಟ್‌ಗಲಿ ತೆಗ್ದ್ ಹಾಕಿದೊ. ಹೊರಗೆ ಹಿರ್ದ್ ಇಸಿದ ಸೊಯ್ದೆ ಕೊಳ್ಳಿಗಳ ಒಂದಕ್ಕೊಂದು ಬೊಟ್ಟಿ, ಅದರ್‌ಂದ ಉದ್ರದ ಗೆಂಡನನೂ ತೆಗ್ದ್ ತಗಡ್‌ನ ಮೇಲೆ ಹರ್ಗಿದೊ. ಹೊರಗೆನ ಗಾಳಿಗೆ ಗೆಂಡಗ ಅರ್ಳಿಕಂಡ್ ನಿಗಿ ನಿಗಿ ಹೊತ್ತಿಕಂಬತಿತ್. ಐದಾರ್ ಸಟ್ಟ್‌ಗ ಗೆಂಡನ ತಗಡ್‌ನ ಮೇಲೆ ಹಾಕಿ,

'ಇದರ್‌ಲಿ ಹಿಟ್ಟ್‌ನ ಮೇಲ್ಬುಡೆ ಲಾಯ್ಕ್‌ಲಿ ಕಾಯ್ದದೆ ಎಂತ ನೆನ್ಸಿಕಂಡ್, ಹಿಟ್ಟ್ ಬೇಯಕಾಕನ ನನ್ನ ಗುಡ್ಸುವ ಕೆಲ್ಸನ ಮುಗ್ಸಿನೆ'ತ ಅಟ್ಟಕೆ ಹತ್ತುವ ಏಣಿ ಕೆಳಗೆ ಮೂಲೆಲಿಸಿದ ಕಮ್ಮುನ ಸೋಗೆನ ಕಡ್ಡಿಂದ ಮಾಡ್ದ ಮಾಯ್ಸುನ ತಕಂಡ್, ಅದರ ಬುಡನ ಅಂಗೈಲಿ ತಟ್ಟಿ ಹೊರಗೆ ಎದ್ರ್‌ನ ಪುಡೆನ ಜಗಲಿಂದಲೇ ಗುಡ್ಸಿಕೆ ಸುರು ಮಾಡ್ದೊ.

ಜಗಲಿನ ಒಂದು ಮೂಲೆಲಿ ಕಿಡ್ಕೆ ಹಕ್ಕಲೆ ಒಂದ್ ಮೇಜ್, ಅದರ ಅಕ್ಕ ಪಕ್ಕಲಿ ಎರ್ಡ್ ಕುರ್ಸಿಗ ಇದ್ದೊ. ಕುರ್ಸಿಗಳ ಆಚೆ ಈಚೆ ಸರ್ಸಿ, ಅದರಡಿ ಮೇಜಿನಡಿ ಗುಡ್ಸಿ, ಎದ್ರ್‌ನ ಬಾಕಿಲ್ ಹಕ್ಕಲೆ ಗುಡ್ಸಿ, ಜಗಲಿನ ಎಡ್ದ ಪುಡೆಲಿ ಎದ್ರ್ ಬದ್ರ್ ಇಸಿದ, ಒಂದ ಸ್ಟೂಲ್, ಒಂದ್ ಈಚಾರ್‌ನ ಅತ್ತಿತ್ತ ಸರ್ಸಿ, ಗುಡ್ಸಿ, ಕಸನ ತೆಗ್ದ್, ಇಜ್ಜೆಲಿಗೆ ಇಳ್ದ್, ಚಾಳೆ ಬುಡಕ್ಕೆ ಇಟ್ಟ್ ಬಂದೊ. ಜಗಲಿನ ಒಳಗೆ ನೋಡು ತಿಣೆ. ಅದರ ಪಕ್ಕಲಿ ಒಂದು ಮೊಲ್ಗುವ ಕೋಣೆ ಇತ್. ನೋಡು ತಿಣೆಲಿ ಮಕ್ಕ ಮೊಲ್ಗಿದ ಹಾಸಿಗೆಲಿ ಮೋನಗೊರ್ಕೆ ಹೊಡ್ಯತಿತ್. ಇಂದ್ ರಜೆ ಅಲ್ಲನೋ ಹಂಞ ಹೊತ್ತ್ ಮೊಲ್ಗಲೀಂತ ಸರಸಕ್ಕ ತಿಣೆನ ಹಾಂಗೇ ಬುಟ್ಟ್ ಮೊಲ್ಗುವ ಕೋಣೆನ ಗುಡ್ಸಿ, ಅಡ್ಗೆ ಕೋಣೆನನೂ ಗುಡ್ಸಿ ಕಸ ಇಟ್ಟ್ ಬಂದೊ. ಮೋನಂಗೆ ಅವ್ವ ಕೆಲ್ಸ ಮಾಡ್ವ ಸದ್ದ್ ಕೇಳಿ ಎಚ್ಚರಾತ್. ಅಂವ ಹಾಸಿಗೆಂದ ಎದ್ದ್ ಕಣ್ಣೊರ್ಸಿ, ಅಂಗೈ ನೋಡಿ ಶ್ಲೋಕ ಹೇಳಿ, ಅಡ್ಗೆ ಕೋಣೆ ಬಾಕಿಲ್‌ಂದ ಇಜ್ಜೆಲಿಗೆ ಇಳ್ದ್ ಚಾಳೆ ಬುಡಕೆ ಮೈ ನೀರ್ ಬುಡಿಕೆ ಓಡ್ತ್.

ಸರಸಕ್ಕ ಗುಡ್ಸುವ ಕೆಲ್ಸ ಮುಗ್ಸಿ, ನೆಲ ಒರ್ಸಿಕೆ ಅರ್ವೆ ತುಂಡು ಕಟ್ಟಿದ ಕೋಲುನನೂ, ಪ್ಲಾಸ್ಟಿಕ್ ಬಾಲ್ದಿಲಿ ನೀರ್‌ನನೂ ಹಿಡ್ಕಂಡ್ ಬಾಕನ ನೊಡು ತಿಣೆಲಿ ಮೊಲ್ಗಿದ ಮೋನ ಎದ್ದ್ ಹೊರಗೆ ಹೋಗಿತ್. ಅವು ತಿರ್ಗ ನೊಡುತಿಣೆಲಿ ಮಕ್ಕ ಮೊಲ್ಗಿದ ಹಾಸಿಗೆ, ಒಲ್ಲಿನ ಕೊಡ್ಕಿ, ಸರಿಮಾಡಿ ಹಾಸಿಗೆನ ಮೊಂದ್ರಿಲಿ ಸುತ್ತಿ, ಮೊಲ್ಗುವ ಕೋಣೆನ ಮಂಚನ ಮೇಲೆ ಇಸಿ ಬಂದ್, ನೊಡು ತಿಣೆನನೂ ಗುಡ್ಸಿ ಒತ್ತರೆ ಮಾಡ್ದೊ.

ಮನೆ ಎಲ್ಲಾ ಒರ್ಸಿ, ಒಳಗೆ ಬಂದ್ ಹಿಟ್ಟ್‌ನ ನೋಡಿವೆ, ಗೆಂಡ ಎಲ್ಲಾ

ಆರಿಕಂಡ್ ಬಂದಿತ್ತ್. ತಗಡ್‌ನ ಮೊಸಿ ಅರ್ವೆ ಹಿಡ್ದ್ ಮೆಲ್ಲಂಗೆ ತೆಗ್ದ್, ಒಲೆ ಚಿಂಟೆಲಿ ಇಸಿ, ಹಿಟ್ಟ್‌ನ ನೋಡ್ಯೊ. ಮೇಲೆನ ಪುಡೆ ಕೆಂಪಾಗಿ ಕಾದ್, ಹಿಟ್ಟ್ ಬೆಂದದರ ತೋರ್ಸ್ತಿತ್ತ್. ಸರಸಕ್ಕ ಈಗ ಹಿಟ್ಟ್ ಬೆಂದಿರ್‍ದೊಂತ ನೆನ್ಸಿ, ಅದ್ಕೆ ಬಾವೊಡೆ ಮುಚ್ಚಿ, ಇಜ್ಜೆಲಿಗೆ ಬಂದೊ.

ಜಾಜಿ ಜಾಲ್ ಗುಡ್ಸಿ ಆಕಾಕನ ಮೋನ ಬಾತ್. ಅಕ್ಕ, ತಮ್ಮನ ಹಲ್ಲುಜ್ಜಿ, ಮೋರೆ ತೊಳ್ಸಿ ಕೈಕಾಲ್ ತೊಳ್ದತ್. ಮೋನ ಬೈರಾಸ್‌ಲಿ ಕೈ, ಕಾಲ್, ಮೋರೆ ಒರ್ಸಿಕಂಡ್ ಹೊರಗೆ ಬಾತ್. ಅವಿಬ್ರೊರು ಕೊಯ್ದ್ ಇಸಿದ ಬೊಪ್ಪಂಗಾಯಿನ ಮುಟ್ಟಿ, ಮುಟ್ಟಿ ನೋಡ್ಯೊ. ಸರಸಕ್ಕ ಅವರ ಹಕ್ಕಲೆ ಬಂದ್,

'ಬನ್ನಿ, ಕಾಫಿ ಕುಡ್ಯನಿ'ಂತ ಹೇಳಿ ಅಡ್ಗೆ ಕೋಣೆಗೆ ಕರ್‍ಕೊಂಡೋಗಿ ಕುದ್ರಿಸಿ, ಗೆಂಡೆದಿಟ್ಟ್‌ನ ಚೂರಿಲಿ ಸಣ್ಣ ಸಣ್ಣ ತುಂಡು ಮಾಡಿ, ಸಟ್ಟ್‌ಗಲಿ ಎಳ್ಕಿಸಿ ಒಂದೊಂದು ಪ್ಲೇಟ್‌ಲಿ ಕಲ್ತಪ್ಪದ ತುಂಡುಗಳ ಹಾಕಿ, ಮಕ್ಕಳಿಗೆ ಕೊಟ್ಟೊ. ಮಕ್ಕಳ ಹಣೆಲಿ ದೇವ್ರ ಕುಂಕುಮದ ಬೊಟ್ಟು ಇಲ್ಲದರ ನೋಡಿ,

'ನೀವು ದೇವ್ರಿಗೆ ಅಡ್ಡಬಿದ್ದ್, ಕೈ ಮುಗ್ದ್ ಕುಂಕುಮದ ಬೊಟ್ಟ್ ಹಾಕಿತ್ಲೆನೋ?'ಂತ ಕೇಳ್ದೊ.

'ನೀವು ಅಂಬೆರ್ಪು ಮಾಡ್ದರಿ'ಂತ ಜಾಜಿ ಹೇಳಿ, ತಮ್ಮನ ಕರ್‍ಕಂಡ್ ನೊಡು ಕೋಣೆಲಿ ಇಸಿದ ದೇವರ ಪಟದ ಹಕ್ಕಲೆ ಓಡ್ತ್. ಅಕ್ಕ, ತಮ್ಮ ಇಬ್ರೊರು ದೇವ್ರಿಗೆ ಅಡ್ಡಬಿದ್ದ್, ಕೈ ಮುಗ್ದ್, ಮುಂದಕ್ಕೆ ದೇವ್ರ ಕುಂಕುಮನ ಬೊಟ್ಟ್ ಇಸಿ, ತಿರ್‍ಗ ಅಡ್ಗೆಕೋಣೆಗೆ ಬಂದ್ ಮನೆ ಎದ್ರ್ ಚಕ್ಕಳ-ಬಕ್ಕಳ ಕುದ್ದ್‌ಕಂಡ್ ಬಟ್ಲ್‌ಲಿ ಇಸಿದ ಕಲ್ತಪ್ಪದ ತುಂಡುಗಳ ತಿಂಬಕೆ ಸುರು ಮಾಡ್ದೊ. ಜಾಜಿಗೆ ಮತ್ತೆ ಮೋನಂಗೆ ಕಲ್ತಪ್ಪಾಂತೇಳ್ರೆ ಬಾಳ ಕುಸಿ. ಅದರ ಮೇಲ್ಪುಡೆ ಗೆಂಡಲಿ ಬೆಂದ್ ಕೆಂಪಾದರ ತೆಗ್ದ್ ಜಗ್ದ್, ಜಗ್ದ್ ತಿಂಬಕೆ ಅವ್ಕೆ ಬಾಳ ಕುಸಿ. ಮಕ್ಕ ಇಬ್ರೊರು ಮೋರೆ ಮೋರೆ ನೋಡಿಕಂಡ್ ನೆಗಾಡಿಕಂಡ್ ಕಲ್ತಪ್ಪ ತಿಂಬೊದರ ನೋಡಿ,

'ಕಾಯ್ ಪೊಜ್ಜಿ ಕಡ್ಪಳೆ, ಕೊಡೊಕೊ' – ಸರಸಕ್ಕ ಕೇಳ್ದೊ.

'ಬೇಡ ಅವ್ವ, ನಾವ್ಗೆ ಜೇನ್ ಹಾಕ್.' – ಮೋನ ಹೇಳ್ತ್.

ಸರಸಕ್ಕ ಬೆಸಗೆಲಿ ಇಸಿದ ಜೇನ್ ಕುಪ್ಪಿಂದ ಜೇನ್ ತೆಗ್ದ್, ಇಬ್ರೊರ ಬಟ್ಲ್‌ಗೆ ಹಂಞ, ಹಂಞ ಜೇನ್ ಹೊಯ್ದ್ ಕೊಟ್ಟೊ. ಮಕ್ಕ ಜೇನ್‌ಲಿ ಕಲ್ತಪ್ಪದ ತುಂಡುನ ಕಂತಿಸಿ, ಕಂತಿಸಿ ತಿಂದ್, ಕಾಫಿ ಕುಡ್ದೊ.

ಮೋನ ಅವ್ವನೊಟ್ಟಿಗೆ, 'ಅವ್ವಾ, ನಾ ಅಚ್ಚಿ ಮನೆಗೆ ಆಡಿಕೆ ಹೋನೆ'ಂತ ಹೇಳಿ ಇಜ್ಜೆಲಿಗೆ ಇಳ್ದ್, ಅಲ್ಲಿ ಒಣ್ಗಿಕೆ ಹಾಕಿದ ಗೇರ್ದ ಹಣ್ಣ್‌ನ ಬೀಜಂದ ಒಂದು ಒಡ್ಡಿ ಬೀಜನ ತೆಗ್ದ್ ಚಡ್ಡಿ ಜೋಬುಗೆ ಹಾಕಿ, ಅಚ್ಚುತನ ಮನೆಗೆ ಬೀಜ ಕುಟ್ಟುವ

ಆಟಕ್ಕೆ ಹೋತ್. ಅಂವ ಗುರಿ ಇಸಿ, ಬೀಜ ಕುಟ್ಟುವದರ್ಲಿ ಬಾಳ ಬಿರ್ಸ. ಒಂದೇ ಬೀಜಲಿ ಹತ್ತಿಪ್ಪತ್ತ್ ಬೀಜನ ಪಡ್ಕಂಬತಿತ್ತ್.

ಜಾಜಿ ಅವ್ವನೊಟ್ಟಿಗೆ, 'ಅವ್ವಾ, ನಾ ರಾಜಿ ಮನೆಗೆ ಜಬ್ಲಿ ಆಟ ಆಡಿಕೆ ಹೋನೆ'ಂತ ಹೇಳ್ತ್, ಆಗ ಸರಸಕ್ಕ,

'ನೀ ಈ ಕೋಲಲಿ ಹೋದ್ಯನೋ? ಬಾ. ನಿನ್ನ ತಲೆ ಬಾಚಿನೆ.' ಎಂತಹೇಳಿ ಒಳಗೆಂದ ಒಂದು ಮಿಳ್ಳಿಲಿ ಕಾಯೆಣ್ಣೆತಂದ್,

'ಬಾಚಣಿಕೆ ತಕಂಡ್ ಬಾ'– ಎಂತ ಹೇಳ್ದೊ. ಜಾಜಿ ನಡು ಒಳಗೆಂದ ಹಲಗೆ ಮೇಲೆ ಇಸಿದ ಬಾಚಣಿಕೆನನೂ, ಒಂದು ಸಣ್ಣ ಕನ್ನೆಟಿನನೂ ತಕಂಡ್ ಬಂದ್ ಅವ್ವನ ಎದ್'ರ್ ಕುದ್ದತ್.

ಸರಸಕ್ಕ ಅವರ ಅಂಗೈಗೆ ಎಣ್ಣೆ ಹೊಯ್ದ್ ಅದರ ಮಗಳ ನೆತ್ತಿಗೆ ಒತ್ತಿ, ತಟ್ಟಿ, ತಟ್ಟಿ, ಹಂಞ ಎಣ್ಣೆನ ಕೈಲಿ ತಕಂಡ್, ಎರ್ಡ್ ಅಂಗೈನ ಪೂಜಿ, ಮಗಳ ಕೂದಲ್‌ಗೆ ಸೆರೆ ಸೆರೆ ಹಚ್ಚಿ, ಬಾಚಿಕೆ ಸುರು ಮಾಡ್ದೊ. ಚಿಕ್ಕ್ ತೆಗ್ಟ್, ನೊಡು ಬೊಗ್ತಲೆ ತೆಗ್ದ್ ಬಾಚಿ ಗಟ್ಟಿಲಿ ಮೂರು ಕಾಲ್'ನ ಜಡೆ ಹಾಕಿ, ಕೊಡಿಗೆ ರಿಬ್ಬನ್ ಹಾಕಿ ನೆಯ್ದ್ ಗಂಟ್‌ಹಾಕಿ, ಗೊಂಡೆ ಹಾಕಿದೊ. ಜಾಜಿ ಕನ್ನೆಟಿ ನೋಡಿಕಂಡ್ ಕುಸಿಲಿ ನೆಗಾಡ್ತ್. ಕನ್ನೆಟಿ, ಬಾಚಣಿಕೆನ ನೊಡು ಒಳಗೆ ಹಲಗೆಲಿ ಇಸಿ ಬಂದ್, ಕಿಸೆಗೆ ಕೈ ಹಾಕಿ ನೋಡ್ತ್. ಕಿಸೆಲಿ ಪಲ್ಲೆ ಕಾಯಿ ಇತ್ತ್.

'ಅವ್ವಾ, ನಾ ಬನ್ನೆ'ತ ಹೇಳಿ ರಾಜಿ ಮನೆಗೆ ಓಡ್ತ್.

ರಾಜಿ, ಜಾಜಿ ನಾಕ್‌ನೇ ಕ್ಲಾಸ್'ಲಿ ಒದ್ತಿದ್ದೊ. ಮೋನ ಎರಡ್ನೇ ಕ್ಲಾಸ್'ಲಿ ಓದ್ತಿತ್ತ್.

ರಾಜಿ ಮನೆಗೆ ಬಾಕಾಕನ ರಾಜಿನ ಅವ್ವ ಸೀತ ಅದರ ಮುಂದೆ ಕುದ್ರಿಸಿಕಂಡ್ ತಲೆ ಬಾಚ್ತಿದ್ದೊ. ನೊಡು ಬೊಗ್ತಲೆ ತೆಗ್ಟ್, ಹಿಂದೆನೂ ಎರ್ಡ್ ಬಾಗ ಮಾಡಿ, ಎಡ್ದ ಪುಡೆ ಜಡೆ ಹೆಣ್ದ್ ಆಗಿತ್ತ್. ಅದರ ಕೊಡಿಗೆ ಕೆಂಪು ರಿಬ್ಬನ್ ಹಾಕಿ ಕಟ್ಟಿ, ಅದರ ಎತ್ತಿ ಕೆಬಿ ಹಕ್ಕಲೆ ಜಡೆನ ಬುಡಲಿ ಕಟ್ಟಿ ಗೊಂಡೆ ಹಾಕಿದ್ದೊ. ಬಲ್ದ ಪುಡೆನ ಕೂದೊಲು ಬಾಚಿ ಜಡೆ ಹಾಕ್ತಿದ್ದೊ. ಜಾಜಿ ಅವು ಜಡೆ ಹಾಕುದರನೇ ನೋಡಿಕಂಡ್ ನಿತ್ತತ್. ರಾಜಿಗೆ ತಲೆ ತುಂಬಾ ಕೂದೊಲಿತ್ತ್. ಕುಂಡೆ ಅಂಡ್‌ಗೆ ಮುಟ್ಟ ಜಡೆ ಇಳ್ಯತಿತ್ತ್. ಜಾಜಿ ತನ್ನ ಮೋಟು ಜಡೆನ ಹಿಂದೆಂದ ಎಳ್ಡ್ ತಂದ್ ನೋಡ್ತ್. ರಾಜಿನಾಂಗೆ ನಂಗುನೂ ಉದ್ದಕ್ಕೆ ಕೂದೊಲು ಇರ್ತಿದ್ದರೆ ಎಸ್ಟ್ ಪೊರ್ಲಿತ್ತ್‌ಂತ ನೆನ್ಸಿಕಂಡತ್. ರಾಜಿನ ಅವ್ವ ಸೀತಕ್ಕ ಜಾಜಿನ ನೋಡಿ,

'ಓ ಜಾಜಿ, ಬಾ, ಬಾ ಆತ್ ಜಡೆ ಹಾಕುವ ಕೆಲ್ಸ ಮುಕ್ಕಂಡ್ ಬಾತ್. ಇನ್ನ್ ನೀವಿಬ್ಬೊರು ಆಟ ಆಡಿನಿ'ಂತ ಹೇಳಿ ಬಲ್ದ ಪುಡೆನ ಜಡೆನನೂ ಎತ್ತಿಕಟ್ಟಿ

ಗೊಂಡೆ ಪಾಕಿದೊ. ರಾಜಿನ ಕೆಬಿ ಹಕ್ಕಲೆ ಕೆಂಪು ರಿಬ್ಬನ್‌ನ ಗೊಂಡೆ. ಅದರ ಮೋರೆಗೆ ಪೊರ್ಲು ಒಪ್ಪ್‌ತಿತ್ತ್. ಸೀತಕ್ಕ,

'ಕಾಪಿ ಆತಾ? ತಿಂಬಕೆ ಎಂತಾ?'ಂತ ಕೇಳ್ದೊ.

'ಕಲ್ತಪ್ಪ' – ಜಾಜಿ ಹೇಳ್ತ್.

ಜಾಜಿ ಎದ್ದ್, ಕನ್ನೆಟಿ – ಬಾಚಣಿಕೆನ ಮನೆ ಒಳಗೆ ಇಸಿ ಬಂದ್, ಜಾಜಿನ ಕೈ ಹಿಡ್ಕಂಡತ್.

'ಪಲ್ಲೆಕಾಯಿ ತಂದಳನೋ?'–ರಾಜಿ ಕೇಳ್ದೆ. ರಾಜಿ ಹಕ್ಕಲೆ ಪಲ್ಲೆ ಕಾಯಿ ಇತ್ತೆ.

ಜಾಜಿ ಕಿಸೆಂದ ಪಲ್ಲೆಕಾಯಿ ತೆಗ್ದ್ ರಾಜಿಗೆ ತೋರ್ಸಿದೆ. ರಾಜಿ ತಲೆ ಹಂದಾಡ್ಸಿ, ನೀರೆಡಿ ಕೊಟಗೆಗೆ ಹೋಗಿ ಅಲ್ಲಿಂದ ಐದಾರ್ ತುಂಡು ಮೊಸಿ ತಾತ್. ಇಜ್ಜೆಲಲಿ ಎರ್ಡ್ ಮಾರ್ ಉದ್ದದ ಗೀಟ್‌ನ ಮೊಸಿಲಿ ಎಳ್ತ್. ಆ ಗೀಟ್‌ಂದ ಒಂದು ಮಾರ್ ದೂರಲಿ ಅಸ್ಟೇ ಉದ್ದದ ಇನ್ನೊಂದು ಗೀಟ್ ಎಳ್ತ್. ಆ ಎರ್ಡ್ ಗೀಟ್‌ನ ಬಂಡನ ಅಡ್ಡ ಗೀಟ್ ಎಳ್ದ್ ಸೇರ್ಸಿತ್. ಹಾಂಗೆನೇ ಕೊಡಿನನೂ ಅಡ್ಡ ಗೀಟ್ ಎಳ್ದ್ ಸೇರ್ಸಿತ್.

ಈಗ ಒಂದು ಆಯತ ಆಕಾರ ಆತ್. ಜಿಬ್ಲಿ ಆಟ ಆಡಿಕೆ ಕಳ್ಳಿ, ಕಳ್ಳಿ ಮಾಡಿ ಗೀಟ್ ಎಳ್ತ್. ಬುಡದ ಕಳ್ಳಿಲಿ ಮೂಲೆಂದ ಮೂಲೆಗೆ ಗುಣುಸು ಆಕಾರಲಿ ಗೀಟ್ ಹಾಕಿತ್. ಆಗ ಅದರ್ಲಿ ನಾಕ್ ಕಳ್ಳಿ ಆತ್. ಒಂದ್, ಎರ್ಡ್, ಮೂರ್, ನಾಕ್‌ಂತ ಆ ಕಳ್ಳಿಲಿ ಮೊಸಿಲಿ ಬರ್ತ್. ಐದ್ನೇ ನಂಬರ್‌ನ ಕಳ್ಳಿನ ಮೇಲ್ಬುಡೆಲಿ ಗೀಟ್‌ನ ಹಕ್ಕಲೆ ರಾಜಿ ತನ್ನ ಪಾದನ ಅಡ್ಡ ಇಸಿ, ಅದರ ಪುಡೆಲಿ ಗೀಟ್ ಎಳ್ತ್. ಅದ್ ನೀರ್ ಮನೆ, ಆಟ ಆಡಿಕನ ನೀರ್ ಮನೆಗೆ ಪಲ್ಲೆಕಾಯಿ ಬಿದ್ದರೆ ಆಟ ನೀರಾಗ್ತಿತ್ತ್. ಮತ್ತೆ ಸುರುಂದಳೇ ಆಟ ಆಡಕಾಗ್ತಿತ್ತ್. ನೀರ್ ಮನೆನ ಆರ್ ನಂಬ್ರ ಬರ್ತ್. ಅದರ ಮೇಲ್ಬುಡೆನ ಕಳ್ಳಿಗೆ ಏಳ್ ನಂಬ್ರ ಬರ್ತ್. ಅದ್ ಸಮುದ್ರ. ಎಂಟ್ನೇ ನಂಬ್ರ ಆಯತದ ಮೇಲ್ಬುಡೆ ಅದ್ ಗಟ್ಟ. ಈಗ ಜಿಬ್ಲಿ ಆಟದ ಚಿತ್ರ ಬುಡ್ಸಿ ಆತ್. ದೂರಂದ ನಿತ್ತ್ ಆ ಚಿತ್ರನ ನೋಡಿ ರಾಜಿ,

'ಯಾರ್ ಸುರು ಆಡ್ದು'ತ ಜಾಜಿನ ಕೇಳ್ತ್.

'ಇಂದ ಪಲ್ಲೆಕಾಯಿ ತಕ. ನೀನೇ ಸುರು ಆಡ್'ಂತ ಹೇಳಿ ಜಾಜಿ ಕಿಸೆಂದ ಪಲ್ಲೆಕಾಯಿ ತೆಗ್ದ್ ರಾಜಿಗೆ ಕೊಟ್ಟದೆ. ರಾಜಿ ಅದರ ಕೈಯಿಂದ ಪಲ್ಲೆಕಾಯಿ ತಕಂಡ್ ಸುರುನ ಮನೆಗೆ ಪಲ್ಲೆಕಾಯಿ ಹಾಕಿ, ಒಂಟಿಕಾಲ್‌ಲಿ ನಿತ್ತ್, ಹಾರಿ ಊರ್‌ದ ಕಾಲ್‌ನ ಪಾದನ ಪಲ್ಲೆ ಕಾಯಿನ ಮೇಲೆ ಇಸಿ, ಅದರ ಜಾರ್ಸಿ ಹೊರಗೆ ತಂದದೆ. ಹೀಂಗೆ ನಾಕ್ ಮನೆನ ಕಾಯಿನನೂ, ಒಂಟಿಕಾಲ್‌ಲಿ ಆಟ

ಆಡಿ ಹೊರಗೆ ತಂದ್, ಐದ್ನೆ ಮನೆಗೆ ಪಲ್ಲೆಕಾಯಿ ಹಾಕಿದೆ. ಒಂದ್ನೇ ಮನೆನ ಮೆಟ್ಟಿ, ನಾಕ್ನೇ ಮನೆನ ಮೆಟ್ಟಿ, ಐದ್ನೇ ಮನೆನ ಪಲ್ಲೆಕಾಯಿ ಮೇಲೆ ಕಾಲಿಸಿ, ಅದರ ನಾಕ್ನೇ ಮನೆಗೆ ಜಾರಿಸಿ, ತಿರ್ಗ ಅದರ ಮೇಲೆ ಮೆಟ್ಟಿ ಅದರ ಒಂದ್ನೇ ಮನೆಗೆ ಜಾರ್ಸಿ, ಅದರ ಮೇಲೆ ಮೆಟ್ಟಿ ಹೊರಗೆ ಪಲ್ಲೆ ಕಾಯಿನ ಜಾರ್ಸಿದೆ. ರಾಜಿ ಪಲ್ಲೆಕಾಯಿ ಆಟಲಿ ಬಾಳ ಬಿರ್ಸೆತಿ. ಜಾಜಿ ಅದ್ ಆಡ್ದರನೇ ನೋಡಿಕಂಡ್ ನಿತ್ತತ್. ಜಾಜಿ ಪಲ್ಲೆ ಕಾಯಿನ ನೀರ್ ಮನೆಗೆ ಹಾಕಿ, ಒಂದೊಂದೇ ಮನೆಗಳ ದಾಟಿ, ನೀರ್ ಮನೆಗೆ ಹಾಕಿದ ಪಲ್ಲೆ ಕಾಯಿ ಮೇಲೆ ಕಾಲಿಸಿ, ಅದರ ಒಂದೊಂದೇ ಮನೆಗೆ ಜಾರ್ಸಿ, ಹೊರಗೆ ತಂದದೆ. ಸಮುದ್ರಕ್ಕೆ ಪಲ್ಲೆ ಕಾಯಿನ ಹಾಕಿ, ಅದರ ನೀರ್ ಮನೆಗೆ ಬೀಳದಾಂಗೆ ರಭಸಲಿ ಜಾರ್ಸಿ, ಆಟ ಆಡಿ ಗೆದ್ದದೆ. ರಾಜಿ ಒಂದೇ ಆಟಲಿ ಗಟ್ಟಮುಟ್ಟಿ ಗೆದ್ದದೇಂತ ಜಾಜಿ ಮೊನ್ಸಲೇ ನೆನ್ಸಿಕಂಡದೆ. ಅದ್ ಗ್ರೇಸಿದಂಗೇ ಆತ್. ಜಾಜಿ ಗಟ್ಟನನೂ ಮುಟ್ಟಿ ಆಟ ಗೆದ್ದದೆ.

ಈಗ ಜಾಜಿನ ಸರದಿ. ಜಾಜಿನೂ ಐದ್ ಮನೆಗಳಿಗೆ ಪಲ್ಲೆಕಾಯಿ ಹಾಕಿ ಸಲೀಸಾಗಿ ಆಟ ಆಡ್ತ್. ಆದರೆ ನೀರ್ ಮನೆಗೆ ಪಲ್ಲೆಕಾಯಿ ಹಾಕಿಕನ ಅದ್ ಸಮುದ್ರಕ್ಕೆ ಬೀತ್. ಅದರ ಆಟ ಹಾಳಾತ್. ರಾಜಿ ಎರಡೇ ಆಟಲಿ ನೀರ್ ಮನೆಗೆ ಪಲ್ಲೆಕಾಯಿ ಹಾಕಿಕಾಕನ, ಅದ್ ಗೀಟ್‌ಗೆ ಮುಟ್ಟಿ ಆಟ ಹಾಳಾತ್. ಹೀಂಗೆ ಅವಿಬ್ಬೊರು ಜಿಬ್ಲಿ ಆಟ ಆಡಿಕಂಡಿರಿಕಾಕನ ಸೀತಮ್ಮನೊವು ಮನೆ ಒಳಗೆಂದ ಕೈಲಿ ಹಲ್ಸಿನ ಹಣ್ಣ್‌ನ, ತೆಕ್ಕ್‌ನ ಸೊಪ್ಪುಲಿ ಮೊಡ್ಚಿ ಇಸಿದ ಓಟ್ಟ್‌ನ ಹಿಡ್ಕಂಡ್ ಬಂದ್ ಮಕ್ಕಳ ಕರ್ದೊ. ಹಲ್ಸಿನ ಹಣ್ಣ್‌ನ ಓಟ್ಟ್‌ನ ನೋಡಿ ಜಾಜಿನ ಬಾಯಿಲ್ ನೀರ್ ಬಾತ್. ಸೀತಕ್ಕ,

'ಹೋಗಿ, ಕೈ ತೊಳ್ಕಂಡ್ ಬನ್ನಿ.'ಂತ ಹೇಳಿ, ಓಟ್ಟ್‌ನ ಮೇಲೆನ ಎಲೆನ ತೆಗ್ದ್, ಅದರ ನೊಡುಲಿ ಮುರ್ದ್, ಎರ್ಡ್ ತುಂಡು ಮಾಡಿ ಅವ್ಕಿಬ್ಬೊರಿಗೂ ಹಂಚಿದೊ. ಮಕ್ಕ ಕುಸಿಂದ ತಿಂದ್ ಕೈ ತೊಳ್ದ್, ತಿರ್ಗ ಆಟ ಸುರು ಮಾಡ್ದೊ. ಸೂರ್ಯ ನೊಡುನೆತ್ತಿಗೆ ಬಾಕಾಕನ ಜಾಜಿ ಮನೆಂದ ಸರಸಕ್ಕ,

'ಜಾಜಿ, ಜಾಜೀ'ತ ಕರ್ಯೋದು ಕೇಳ್ತ್. ಜಾಜಿ ಅವ್ವ ಕರ್ಯೋದರ ಕೇಳಿ, ಪಲ್ಲೆಕಾಯಿನ ಎತ್ತಿ ಜೋಬುಲಿ ಹಾಕಿ,

'ಅವ್ವ ಕರ್ದವೆ. ನಾ ಹೋನೆ'ತ ಹೇಳಿ ಹೊರ್ಟತ್. ಆಗ ಸೀತಕ್ಕ ಒಳಗೆಂದ ಅರ್ದ ಹಲ್ಸಿನ ಹಣ್ಣ್ ತಂದ್,

'ಇಂದ, ಇದರ ಮನೆಗೆ ತಕೊಂಡೋಗಿ ಓಟ್ಟ್ ಮಾಡಿ ತಿನ್ನಿ'ತ ಹೇಳಿಕೊಟ್ಟವೆ. ಜಾಜಿ ಕುಸಿಂದ ತಕಂಡತ್. ಸೀತಕ್ಕ ಒಂದು ಪ್ಲಾಸ್ಟಿಕ್ ತೊಟ್ಟೆಗೆ ಅದರ ಹಾಕಿ ಜಾಜಿನ ತಲೆಲಿ ಇಸಿದೊ. ಜಾಜಿ,

'ರಾಜಿ, ಮದ್ಯಾನದ ಮೇಲೆ ನಮ್ಮಲ್ಲಿಗೆ ಆಡಿಕೆ ಬಾ, ಕಣ್ಣಮುಚ್ಚಾಲೆ ಆಡೊಮೊ. ಮೋನು, ಅಚ್ಚುತನೂ ಸೇರಿಕಂಡವೆ'ತ ಹೇಳ್ತ್. ರಾಜಿ ತಲೆ ಹಂದಾಡ್ಸಿತ್.

ಜಾಜಿ ತಂದ ಹಲ್ಸಿನ ಹಣ್ಣ್‌ನ ನೋಡಿ ಸರಸಕ್ಕಂಗೆ ಕುಸಿ ಆದೆ. ಅವರ ತಲೆಂದ ಹಣ್ಣ್‌ನ ಇಳ್ಸಿ, ಜಗಲಲಿ ಇಸಿ,

'ಹೋಗ್ ನೀ ಮೋನನ ಕರ್‌ಕಂಡ್, ಕೈಕಾಲ್ ತೊಳ್ದ್ ಉಂಬಕೆ ಬನ್ನಿ'ತ ಹೇಳಿ ಒಳಗೆ ಹೋದೊ. ಜಾಜಿ ಅಚ್ಚಿನ ಮನೆಗೆ ಹೋಗಿ ಮೋನನ ಕರ್‌ಕಂಡ್ ಬಾತ್. ಮೋನ ಆಗಳೇ ಇಪ್ಪತ್ತೈದ್ ಬೀಜನ, ಬೀಜಕುಟ್ಟಿ ಸಂಪಾದಿಸಿತ್ತ್. ಅದರ ಜಂಬದ ಅಕ್ಕಂಗೆ ತೋರ್‌ಸಿ ನೆಗಾಡ್ತ್.

ಸರಸಕ್ಕ ಮೂರು ಬಟ್ಲ್ ಇಸಿಕಂಡ್ ಅಡ್ಗೆ ಕೋಣೆಲಿ ಮಕ್ಕಳ ಕಾಯೊತಿದ್ದೊ. ಮಕ್ಕ ಬಂದ ಕೂಡ್ಲೇ ಅವರ ಮಣೆ ಮೇಲೆ ಕುದ್ರಿಸಿ, ಎದ್ರ್ ಬಟ್ಲ್ ಇಸಿ ಇಕ್ಕಿದೊ. ಕುಡು-ಬಸಳೆ ಗೈಪುಲಿ ಮಕ್ಕ ಹೊಟ್ಟೆ ತುಂಬಾ ಉಂಡ್, ತಾವು ಆಡ್ದ ಆಟದ ಇಸಯ ಮಾತಾಡಿಕಂಡ್, ಕುಸಿಪಟ್ಟೊ. ಉಂಡ್ ಕೈ ತೊಳ್ದ್ ಬಾಕನ ಸರಸಕ್ಕ,

'ಬಿಸ್ಲ್‌ಗೆ ಹೊರಗೆ ಹೋಗ್ಬೇಡಿ. ಪಂಞ ಮೊಲ್ಗಿನಿ'ತ ಹೇಳಿ ಒಂದು ಮೊಂದ್ರಿನ ನೊಡುತಿಣೆಲಿ ಹಾಕಿ ಅವುನೂ ಮೊಲ್ಗಿ, ಮಕ್ಕಳ ಅಕ್ಕ-ಪಕ್ಕ ಮೊಲ್ಗಿಸಿಕಂಡೊ. ಆಟ ಆಡಿ ದಣ್ದ ಮಕ್ಕಳ್‌ಗೆ ಅಲ್ಲೇ ಕಣ್ಣ್ ಕೂರ್ತ್. ರಾಜಿ ಹೊರಗೆಂದ,

'ಜಾಜೀ, ಜಾಜೀ'ತ ಕರ್‌ಕಾಕನನೇ ಅವ್ಕೆ ಎಚ್ಚರ. ಅವು ಬೇಗ ಬೇಗ ಎದ್ದ್ ಹೊರಗೆ ಬಂದೊ. ರಾಜಿ ಕೈಲಿ ಏಳೆಂಟ್ ತೆಕ್ಕ್‌ನ ಸೊಪ್ಪುನ ಹಿಡ್ಕಂಡ್ ಬಂದಿತ್ತ್. ಅದರ ನೋಡಿ ಸರಸಕ್ಕ ಕುಸಿಂದ,

'ನೀ ಸೊಪ್ಪು ತಂದದ್ ಬಾಳ ಒಳ್ಳೇದಾತ್. ಇಲ್ಲರೆ ನಾ ಬಾಳೆಲೆಲಿ ಮೊಡ್ಚಿ ಇಸ್ತಿದ್ದೆ. ತೆಕ್ಕ್‌ನ ಸೊಪ್ಪುಲಿ ಮೊಡ್ಚಿ ಇಸಿರೆ, ಹಿಟ್ಟ್‌ನ ರುಚಿನೇ ಬೇರೆ'ಂತ ಹೇಳಿ ಸೊಪ್ಪುನ ತಕಂಡೊ ಜಾಜಿ,

'ಮೋನ ನೀ ಅಚ್ಚುತನ ಕರಿ. ನಾವು ಕಣ್ಣ ಮುಚ್ಚಾಲೆ ಆಟ ಆಡೊಮೊ'ತ ಹೇಳ್ತ್.

ಮೋನ 'ಡು...ರ್‍ರೂ....'ತ ಎರ್ಡ್ ಕೈಲಿ ಬಸ್ಸ್ ಬುಟ್ಟ್‌ಕಂಡ್ ಅಚ್ಚುತನ ಮನೆಗೆ ಓಡ್ತ್. ಅವು ಬಂದ ಮೇಲೆ ಮಕ್ಕ ಆಡಿಕೆ ಸುರು ಮಾಡ್ದೊ.

'ಅವ್ವಾ, ಅವ್ವಾ, ನೀವು ನಮ್ಮ ಕಣ್ಣ್ ಮುಚ್ಚೋಕು'ತ ಜಾಜಿ ಅವ್ವಂಗೆ ಹೇಳ್ತ್. ಸರಸಕ್ಕ ಕುಸಿಂದ ಮಕ್ಕಳ ಆಟಕ್ಕೆ ಸೇರಿಕೊಂಡೊ. ಸುರುಗೆ ಮೋನನ ಕಣ್ಣ್‌ಮುಚ್ಚಿ,

'ಕಣ್ಣಾ ಮುಚ್ಚೆ ಕಾಡೇ ಕೂಡೇ, ಉದ್ದುನ ಮೂಟೆ ಉರ್ಳೇ ಹೋತ್. ನನ್ನ

ಹಕ್ಕಿನ ಬುಟ್ಟನೆ. ನಿಮ್ಮ ಹಕ್ಕಿನ ಹಿಡ್ಕಣಿ'ತ ಹೇಳಿ ಮೋನನ ಕಣ್ಣ್ ಬುಟ್ಟೊ. ಮೋನ ಕಣ್ಣ್‌ಬುಟ್ಟ್ ನೋಡಿಕಾಕನ ಅವು ಯಾರೂ ಅಂವನ ಕಣ್ಣ್‌ಗೆ ಬೀತ್ಲೆ. ಅಂವ ಮನೆ ಸುತ್ತೋಳೂ ಹುಡ್ಕಿ, ಮನೆ ಒಳಗೆ ಹೋದೆ. ರಾಜಿ ಏಣಿ ಅಡಿಲಿ ಅಡಿಂಗಿ ಕುದ್ದಿತ್ತ್. ಮೋನ ಅದರ ಹಿಡ್ತ್. ಜಾಜಿ ಒಳಗೆ ಮೊಲ್ಲುವ ಮಂಚದ ಅಡಿಲಿ ಅಡಿಂಗಿತ್ತ್. ಅದರನೂ ಮೋನ ಕಂಡ್ ಹಿಡ್ತ್. ಅಚ್ಚು ಮಾತ್ರಾ ಎಲ್ಲೂ ಕಂಡತ್ಲೆ. ಮೋನಂಗೆ ಹುಡ್ಕಿ, ಹುಡ್ಕಿ ಸಾಕಾಗಿ ಹೊರಗೆ ಬಂದ್, ಬಿಂಬುಳಿ ಮರದ ಹಕ್ಕಲೆ ನಿತ್ತ್ ಸುತ್ತೋಳೂ ನೋಡ್ದೆ. ಪೇರಳೆ ಮರಲಿ ಹತ್ತಿ ಅಚ್ಚು ಕುದ್ದಿತ್ತ್. ಮೋನ 'ಹೋ'ಂತ ಬೊಬ್ಬೆ ಹೊಡ್ದ್,

'ಮರಲಿ ಕುದ್ರಿಕಾಗದ್. ಕೆಳಗೆ ಇಳಿ'ತ ಹೇಳ್ತ್. ಅಚ್ಚು ಕೆಳಗೆ ಇಳ್ಯಕಾಕನ ಮೋನ ಅವನ ಹಿಡ್ತ್. ಹೀಂಗೆ ಒಬ್ಬೊಬ್ಬನನೇ ಕಣ್ಣ್ ಮುಚ್ಚಿ ಆಟ ಆಡಿಕಂಡಿರಿಕಾಕನ ಹೊತ್ತ್ ಹಿಂಬೊತ್ತಾತ್.

'ಇನ್ನ್ ಆಡ್ದ್ ಸಾಕ್'ತ ಸರಸಕ್ಕ ಹೇಳಿ ಒಳಗೆ ಹೋಗಿ, ಬೊಳ್ಪುಗೆ ತಿಂದ್, ಒಳ್ದ ಕಲ್ತಪ್ಪದ ತುಂಡುಗಳ ತಂದ್ ಎಲ್ಲೋವ್ಕೂ ಹಂಚಿದೊ. ಒಣ್ಗಿ ಗಟ್ಟಿ ಆದ ಕಲ್ತಪ್ಪದ ತುಂಡುನ ಮಕ್ಕ ಕಚ್ಚಿ, ಕಚ್ಚಿ ತಿಂದ್, ಸರಸಕ್ಕ ತಂದ್ ಕೊಟ್ಟ ಕಾಫಿನ ಕುಡ್ದೊ. ಅಚ್ಚು ಅಂವನ ಮನೆಗೆ ಹೋತ್. ಸರಸಕ್ಕ ರಾಜಿನೊಟ್ಟಿಗೆ,

'ನಿಲ್ಲ್. ನಿಂಗೆ ಒಂದ್ ಬೊಪ್ಪಂಗಾಯಿ ಕೊಟ್ಟನೆ. ಹಣ್ಣ್ ಮಾಡಿ ತಿನ್ನ್'ತ ಹೇಳಿ, ಬೊಳ್ಪುಗೆ ಕೊಯ್ದಿಸಿದ ಬೊಪ್ಪಂಗಾಯಿಂದ ಒಂದ್ ತಂದ್ ಕೊಟ್ಟೊ. ರಾಜಿ ಕುಸಿಂದ ಅದರ ತಕೊಂಡೋತ್. ಸರಸಕ್ಕ ಮಕ್ಕಳೊಟ್ಟಿಗೆ,

'ನೀವು ಮಿಂದ್, ದೇವ್ರಿಗೆ ದೀಪ ಇಸಿ ಬಜನೆ ಮಾಡಿನಿ. ನಾ ನಾಳೆಗೆ ಹಲ್ಸನ ಹಣ್ಣ್‌ನ ಹಿಟ್ಟ್‌ಗೆ ಅಟ್ಟಣೆ ಮಾಡ್ನೆ.'ತ ಹೇಳಿ ಒಳಗೆ ಹೋದೊ.

ಜಾಜಿ ಮೋನನೊಟ್ಟಿಗೆ, 'ಇಂದ್‌ನ ರಜೆ ಮಜಾಲಿ ಕಳ್ತಲ್ಲ?'ತ ಹೇಳಿ ಅಂವನ ಕರ್ಕಂಡ್ ನೀರೆಡಿ ಕೊಟಗೆಗೆ ಹೋತ್.

* * * *

✍ಎಂ. ಜಿ. ಕಾವೇರಮ್ಮ

ಕವನ ಜೊಂಪೆ

# ಗುಡ್ಡೆಮನೆ ಅಪ್ಪಯ್ಯ ಸಂಸ್ಮರಣೆ

## ಕೋಲಾಟದ ಹಾಡ್

ಓ... ಹೋ... ಹೋ ಹೋ ಅಪ್ಪಯ್ಯಾ ಅಪ್ಪಯ್ಯಾ
ಓ... ಹೋ ಹೋ ಹೋ ಗುಡ್ಡೆಮನೆ ಅಪ್ಪಯ್ಯಾ
ನಾವೆಲ್ಲಾ ಬಂದೊಳೋ ನಿಮ್ಮೆಸ್‌ರ್ಲಿ ಸೇರ್‍ಯೊಳಾ
ಸ್ವಾತಂತ್ರ್ಯದ ಹರಿಕಾರ ಗುಡ್ಡೆಮನೆ ಅಪ್ಪಯ್ಯಾ
    ನಿಮ್ಮ ಹೆಸ್ರ್ ಕೇಳ್‌ಕನಾ... ಕೆಬಿ ಎಲ್ಲಾ ನೆಟ್ಟಂಗೇ
    ಹುಲಿ ಮೊಸೆ ಹುಲಿ ಎದೆ... ಕಂಣ ಮುಂದೆ ನಿಂತದೇ
    ಕುದ್ರೆ ಸವಾರಿ ಬಾಳ್‌ಕತ್ತಿ... ಕಂಣ ಮುಂದೆ ನಿಂತದೇ
    ವೈರಿ ಪೆಟ್ಟು ತಡ್ದು ಅವ್ನ... ಪರಲೋಕಕ್ಕೆ ಕಳಿಸಿಕೆ
ಕೆಂಪು ಜನ್ರ ಕುಟಿಲ ನೀತಿ... ಎಲ್ಲ ಕಡೆ ಒಂದೇಯಾ
ಬಂಣ ಮಾತ್ರ ಪೊರ್ಲು ಆದ್ರೂ... ಬುದ್ಧಿ ಮಾತ್ರ "ಕಪ್ಪು" ಯಾ
ಚೆಂಡ್ರೀ ಗೀಂತ್ರಿ ಮಾಡೋದರ್ಲಿ... ಎಲ್ರಿಗಿಂತ ಮುಂದೆಯಾ
ಅಂದೂ ಅಷ್ಟೆ ಇಂದೂ ಅಷ್ಟೆ.. ಮುಂದೆ ಎಂದು ಎಂದಿಗೂ
    ಸ್ವಾಭಿಮಾನ ನಾವ್ಗೆ ಬೇಕು... ಸ್ವಂತಿಕೆ ನಾವ್ಗೆ ಬೇಕು
    ನಮ್ಮ ಹುಟ್ಟು ನಮ್ಮ ಬಾಳು... ಸಹಬಾಳ್ವೆ ರೀತಿಲೀ
    ನಮ್ಮ ಮೊಂಣು ನಮ್ಮ ನಾಡು... ಇದು ಎಲ್ಲಾ ಶಾಶ್ವತ
    ಜೀವನಕ್ಕೆ ಅರ್ಥ ಉಟ್ಟು... ಹರಿವ ನೀರ ಹೆಸ್ರಲೀ
ಸ್ವಾತಂತ್ರ್ಯದ ಕಿಡಿ ನಿಮ್ಮ... ಎದೆಯಲ್ಲಿ ತುಂಬುಟು
ರಾಜ ಭಕ್ತಿ ದೇಶಭಕ್ತಿ ನಿಮ್ಮ ಉಸುರಲ್ಲಿ ಬಂದುಟು
ಜನ್ಮಭೂಮಿ ಕರ್ಮಭೂಮಿ... ನಾವ್ಗೆ ಎಂದೂ ಶಾಶ್ವತ
ದೇಶಸೇವೆ ಈಶಸೇವೆ... ಅಂದು ಇಂದು ಶಾಶ್ವತ
    ರಾಜದರ್ಮ ಪ್ರಜಾದರ್ಮ... ಒಂದೇ ದಾರ್ಲಿ ಹೋಕನಾ
    ಹೆಣ್ಣು ಮಕ್ಕ ಆಸ್ತಿಪಾಸ್ತಿ.. ದೇಶದೆದ್ರು ಲೆಕ್ಕ ಇಲ್ಲೆ
    ಹಣ ಕಾಸು ಕೊಸ್ರಿಗಿಂತ... ನಾಡ್ ಮಾನ ದೊಡ್ಡದು
    ಹಂಗೇ ಆಕು ನಾವುಂತೇಳಿ... ಕೈ ಮುಗ್ದು ಬೇಡುವೆ
ಸತ್ಯಕ್ಕೇ ಸಾವು ಇಲ್ಲೆ... ಮಿಥ್ಯೆ ಯಾಗ್ಲು ಮಿಥ್ಯವೇ
ಅಪ್ಪಯ್ಯಾ ನಿಮ್ಮ ಹೆಸ್ರು... ಸತ್ಯಕೊಂದು ಸೇರ್ಪಡೆ
ಅಪ್ಪ ಅಯ್ಯೆ ಸೇರ್‌ದ ನಾವ್ಗೆ... ದೇವ್ರ ಸಮಾನ
ಅಪ್ಪಯ್ಯಾ ಹೆಸ್ರು ನಾವ್ಗೆ ಸ್ವರ್ಗ ಸಮಾನ

✍ಉಮೇಶ ಬಿಳಿಮಲೆ

# ಪುಣ್ಯಕೋಟಿಯ ಕರ್ ಬಚಾವಾತ್

ಕರ್ ಮೇಯ್ತಿತ್;
ನರಿ ನೋಡ್ತಿತ್
ತೋಳಕೆ ಹಸಿವಾಗಿತ್
ಕಣ್ಣಿಲಿ ದೀಪ
ಹುಲಿ ಉರಿಸಿತ್
ಬೆಟ್ಟದ ಮೇಲೆ ಕಾದಿತ್

ಕಂಡತ್ ನಾಯಿ
ಬೊಗಳುತ ಬಾತ್
ಕೋವಿ ಸಮೇತ
ರೈತನೂ ಬಾತ್
ಬಾಳ್ಕತ್ತಿನು ಕೈಲಿತ್

ಕತ್ತಿ ಕೋವಿಯ
ರೈತನ ನೋಡಿ
ನರಿ ಮಡ್ಚಿತ್ ಬಾಲ
ಹೋತೆಲ್ಲಿಗೊ ತೋಳ
ಕಣ್ಣಿನ ದೀಪ
ಆರಿಸಿ ಮತ್ತೆ
ಹುಲಿ ಹಾಕಿತ್ ತಾಳ
ಹಳೆ ಹಾಡಿನ ನೆಂಪಾತ್
ಪುಣ್ಯ ಕೋಟಿಯ
ಕರ್ ಬಚಾವಾತ್

✍ಕುತ್ಯಾಳ ನಾಗಪ್ಪ ಗೌಡ (ಕಿರಣ)

# ನಮ್ಮ ಹಿರಿಯವು

ನಾವ್‌ಗೆ ಬಹಳ ಹೆಮ್ಮೆ ನಮ್ಮ ಹಿರಿಯವು
ಬೇಸಾಯ ಮಾಡಿ ಬದುಕ್‌ತ್ತಿದ್ದೊ ಅವು
ತಿಂಬಕೆ ಬೇಕಾದ್ದರ ಬೆಳೆಸ್‌ತ್ತಿದ್ದೊ ಗದ್ದೆಲಿ
ಖಾಯಿಲೆಗಳಿಗೆ ಮದ್ದ್ ಮಾಡುತ್ತಿದ್ದೊ ಮನೆಲಿ
ಧೈರ್ಯ, ಶಕ್ತಿ, ಸಾಹಸಲಿ ಎತ್ತಿದ ಕೈ
ಹೇಳ್‌ತ್ತಿದ್ದೊ ಸ್ವಾತಂತ್ರ್ಯ ಹೋರಾಟಗಾರಂಗೆ ಜೈ
ಬೊಳ್ಪುಗೆ ಬೇಗ ಎದ್ದ್ ಮಾಡುತ್ತಿದ್ದೊ ಕೆಲಸಗಳ ಸಾಮರ್ಥ್ಯಲಿ
ರಾತ್ರಿಯಾಕನ ನೆಮ್ಮದಿಲೀ ಮಲಗ್‌ತ್ತಿದ್ದೊ ಮಂದ್ರಿಲಿ
ನಡ್‌ಕಂಡೆ ಹೋತಿದ್ದೊ ನೆಂಟರ ಮನೆಗೆ
ಹೋದರೆ ಬೇಗ ಬಾಕಿಲೆ ತಿರ್‌ಗಿ ಊರಿಗೆ
ಚಿಮುಣಿ ದೀಪಲಿ ಓದಿ ವಿದ್ಯಾವಂತರಾದೋ
ವಿದ್ಯೆಯೊಟ್ಟಿಗೆ ವಿನಯದ ಒಡೆಯರಾದೋ
ಸತ್ಯ ಧರ್ಮ ಶಾಂತಿ ಪ್ರೇಮಲಿ ಬಾಳ್‌ತಿದ್ದೊ
ದ್ವೇಷ, ಅಸೂಯೆ, ಅಹಂಕಾರನ ಮೆಟ್ಟಿ ನಿಂತಿದ್ದೊ
ದಿಟ್ಟ, ನೇರ, ನಡೆ ನುಡಿಗಳ ಹೊಂದಿದ್ದೊ
ಸುಖ, ಶಾಂತಿ, ನೆಮ್ಮದಿಲಿ ಜೀವಿಸಿದ್ದೊ

✍ಡಾ। ಜ್ಞಾನೇಶ್ ಎನ್. ಎ.

# ಕಾಡ್ ಹಣ್ಣ್‌ಗಳ ಭರ್ಜರಿ ಬ್ಯಾಟೆ

ಬಂದಿಲ್ಲಿ ನೋಡಿ ನಮ್ಮೂರ ಕಾಡ್‌ದಾರಿ
ಜನ ಓಡಾಡದ ಕಲ್ಲ್ ಮುಳ್ಳ್‌ನ ದಾರಿ
ಗಿಡಗಂಟಿ ತುಂಬಿರುವ ಹಸ್ರ್ ದಾರಿ
ತರತರದ ಹಣ್ಣ್‌ಗಳ ತೋರ್‍ುವ ದಾರಿ
ಅತ್ತ ನೋಡಿ ಕರಿಕಪ್ಪು ಅಮೆ ಹಣ್ಣ್
ಇತ್ತ ನೋಡಿ ಹೊಂಬಣ್ಣದ ಆಜಿನ ಹಣ್ಣ್
ಮರಲಿ ತೂಂಗಿದೆ ಇಡ್‌ಂಜಿ ಹಣ್ಣ್
ಮರದ ಕೆಳಗುಟ್ಟು ಇಪ್ಪುಲಿ ಹಣ್ಣ್
ಆ ಕರೆಲಿ ಕಂಡದೆ ಕಕ್ಕಡೆ ಹಣ್ಣ್
ಈ ಕರೆಲಿ ಉದುರುಟ್ಟು ಕರ್ಮ್‌ಂಜಿ ಹಣ್ಣ್
ಕಡಂಗದುದ್ದ ಬಿದ್ದುಟು ಕಾರೆಹಣ್ಣ್
ಓಣಿ ಕರೆಲಿ ಭಾರಿ ಕೂಮೆ ಹಣ್ಣ್
ಬರೆ ಮೇಲುಟ್ಟು ಗುಮ್ಮಟೆ ಹಣ್ಣ್
ಬರೆ ಬರಿಲಿಟ್ಟು ಗೊಟ್ಟೆ ಹಣ್ಣ್
ಕುಂದು ಮೇಲುಟ್ಟು ಗೊಣ್ಣೆ ಹಣ್ಣ್
ಸುತ್ತ ಮುತ್ತೆಲ್ಲಾ ಚಾಕಟೆ ಹಣ್ಣ್
ಅಲ್ಲುಟ್ಟು ನೋಡಿ ಜೀರ್‍ಗುಳಿ ಹಣ್ಣ್
ಇಳಿಜಾರುದ್ದಕೆ ನೇರ್‍ಳೆಹಣ್ಣ್
ಕೊಲ್ಲಿ ಕರೆಲುಟ್ಟು ಮಜ್ಜಿಗೆ ಹಣ್ಣ್
ಬಾಣೆ ಕರೆಲುಟ್ಟು ರಂಜಳ ಹಣ್ಣ್
ತಿಂಗಳಿಗೊಮ್ಮೆ ಮುಲಾಜಿಲ್ಲದೆ ನಡೀತಿತ್
ನಮ್ಮ ಕಾಡ್ ಹಣ್ಣ್‌ಗಳ ಭರ್ಜರಿ ಬ್ಯಾಟೆ
ಒಂದು ಹಣ್ಣ್ ಮುಗೆಕೆ ಮುಂದೆ
ಮತ್ತೊಂದು ಹಣ್ಣ್ ತಯ್ಯಾರಿರ್‌ತಿತ್

✍ಕುಲ್ಲಚನ ಕಾರ್ಯಪ್ಪ

# ಮನಸ್ಸ್

ವನಸಿರಿ ಒಳಗೆ ಹಾರಾಡ್ದೆ ಕುರೆಮೊರಿ
ಎಗ್ಗಿಲ್ಲದಂಗೆ ಕಂಡ ಕಂಡಲ್ಲಿ
ಮರನೇನ್ ಹತ್ತಿದೆ ಎಲ್ಲಿಂದಲೋ ಹಾರಿ
ಹುಡುಕುತುಟ್ಟು ಹಂಣ್‌ಗಳ ಅಲ್ಲಿ ಇಲ್ಲಿ ॥ ೧ ॥
ಬೇಕಾದ್ ತಿಂದದೆ ಅರ್ಧಂಬರ್ಧ
ಕೆಡ್ಗಿದೆ ಎಲ್ಲನೂ ಮನ ಬಂದಂಗೆ
ನೆಮ್ಮದಿ ಇಲ್ಲದೆಲೆ ಹಾರಿದೆ ಮತ್ತೆ
ಬೀಣೆ ಬೊಳ್ಳಿಲಿ ಜೋತ್ ಎಲ್ಲೆಂದರಲ್ಲಿ ॥ ೨ ॥
ಮರುಕ ಮನಸ್ಸ್‌ಗೆ ಸುತ್ತಿದೆ ವಿಷಯಗ
ಮಾಡಿಕೆ ಒಪ್ಪದೆಲೆ ಯಾವೊಂದು ಕೆಲ್ಸ
ತೆಪ್ಪಂಗೆ ಕುದ್ದರೆ ನಡಿಯದ್ ಬಾಳ್
ಮನಸ್ಸೆಂಬ ಕುರೆ ಮೊರಿನ ಕಟ್ಟಿಹಾಕೋಕು ॥ ೩ ॥

✍ ಮಾಲಾಗೌ

| ಹಿಂಗಾರದ ಚಂದಾ ವಿವರ | | |
|---|---|---|
| ಬಿಡಿ ಪ್ರತಿ | ರೂ. | 20–00 |
| ತ್ರೈವಾರ್ಷಿಕ ಚಂದಾ (ಅಂಚೆ ವೆಚ್ಚ ಸೇರಿ) | ರೂ. | 200–00 |
| ಆಜೀವ ಚಂದಾ | ರೂ. | 600–00 |

ಹಿಂಗಾರದ ವಿಳಾಸ : **ಸಂಪಾದಕರ್**
ಹಿಂಗಾರ ತ್ರೈಮಾಸಿಕ ಪತ್ರಿಕೆ
ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ
1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ,
ಮಡಿಕೇರಿ – 571 201, ಕೊಡಗು ಜಿಲ್ಲೆ
ಇ–ಮೇಲ್ : arebaseacademy@gamil.com
ವೆಬ್‌ಸೈಟ್ : www.arebhasheacademy.com
ದೂರವಾಣಿ : 08272 223055

# ಹಳ್ಳಿ ಹೈದನ ಸಾಸ!

ಕೇಳಿ ಕೇಳಿ ಅಂದ್‌ನ ಹಳ್ಳಿ ಹೈದನ ಕಥೆನ
ಹಂಗೆನೇ ಕೇಳಿ ಅವನ ವ್ಯಥೆನ ॥

ಆ ಹಳ್ಳಿ ಇರ್ದು ಭಾಗಮಂಡಲದ ವನಸಿರಿ ನಡುಲಿ
ಆ ವನಸಿರಿ ಇಂದೂ ರಂಜಿಸಿದೆ ಬೆಟ್ಟ ಒಂದರ ಕರೆಲಿ
ಆ ಹಳ್ಳಿಯೇ ಇಂದಿನ ಸಣ್ಣಪುಲಿಕೋಟು ಗ್ರಾಮ॥

ಹೆಸರಿಗೆ ತಕ್ಕಂತೆ ಇದ್ದೊ ಸಂಣ-ಸಂಣ ಪುಲಿಗ (ಹುಲಿಗ)
ಒಮ್ಮೊಮ್ಮೆ ಕೊಲ್ಲುತ್ತಿದ್ದೊ ಅವು ಊರ್‌ನ ದನಕರ್‌ಗಳ್ನ
ಹಂಗೆನೇ ಕೊಲ್ಲುತ್ತಿದ್ದೊ ಅಲ್ಲಿನ ನಾಯಿ, ಹಂದಿಗಳ್ನ॥

ಅಂದೊಮ್ಮೆ ಅಲ್ಲಿ ಆತ್ ಭಯಂಕರ ಪ್ರಳಯ
ಊರೇ ನಡ್‌ಗಿತ್, ಕಾಡೇ ಕೊಚ್ಚಿತ್, ಬೆಟ್ಟಗ ಜಾರ್ದೊ
ಹೊಳೆ ಕರೆ ಬರೆಗ ಜರ್ದೊ॥

ಅಂದೇ ಆ ಹಳ್ಳಿ ಹೈದ ಹೋಗಿತ್ತ್ ದೂರದ ಗುಡ್ಡೆಗೆ ದನಗಳ ಮೇಸಿಕೆ
ಮಳೆ ಭೀಕರ ಕಂಡ್ ಹೈದ ಹೆದರಿ ಓಡೋಡಿ ಹೋತ್ ಮನೆಕಡೆಗೆ
ಹಂಗೆನೇ ದನಗಳ ಓಡಿಸಿತ್ ಅವುಗಳ ಹಟ್ಟಿ ಕಡೆಗೆ॥

ಆದರೆ ಕಾದಿತ್ತ್ ಅವಂಗೆ ಹೊಳೆನ ಭೀಕರ ದೃಶ್ಯ
ನೀರ್-ಮಣ್ಣ್ ಸೇರಿಕಂಡ್ ಅಲೆ ಆಕಾಶದೆಡೆಗೆ ಎದ್ದ್-ಬಿದ್ದ್, ಹಾರ್‌ತ್ತಿದ್ದೊ.
ಹೊಳೆ ದಾಟಿ ಹೋಕು ಹೈದ ಅವನ ಮನೆ ಕಡೆಗೆ
ಹೊಳೆ ದಾಟಿ ಹೋಕು ದನಕರುಗ ಅವುಗಳ ಹಟ್ಟಿಕಡೆಗೆ॥

ಹೊಳೆಗೆ ಹಾಕಿದ್ದ ಪಾಲ ಕೊಚ್ಚಿ ಹೋಗಿತ್ತ್
ಕಲ್ಲ್-ಮಣ್ಣ್‌ನ ಒಂದೇ ಒಂದು ಸೇತುವೆನೂ ಕೊಚ್ಚಿ ಹೋಗಿತ್ತ್
ಹೈದನ, ದನಕರ್‌ಗಳ ಗತಿ ಅದೋಗತಿ॥

ಹಂಗೂ ಹೈದನ ಧೈರ್ಯ ಕುಗ್ಗಿತ್ತ್‌ಲೆ,
ಅವನ ಗಟ್ಟಿ ಎದೆನ ದಿಟ್ಟತನನೂ ಬಗ್ಗಿತ್ಲೆ॥

ಹೊಳೆದಂಡೆ ಮೇಲೆ ನಿತ್ತ್‌ಕಂಡ್ ಪ್ರಾರ್ಥಿಸಿತ್ ಕಾವೇರಮ್ಮನೊಮ್ಮೆ
ಓ ಕಾವೇರಮ್ಮ ನನ್ನ ಮತ್ತೆ ನನ್ನ ದನಕರ್‌ಗಳ್ನ ಕಾಪಾಡಪ್ಪ ನೀನೊಮ್ಮೆ

ಬಾತ್ ನೋಡಿ ಅವಂಗೆ ಒಂದ್ ಬೆಳಕ್॥
ಹೊಳೆ ಕರೆಲಿ ಡಂಗ್ ಹೊಡದಂಗೆ ನಿತ್ತಿದ್ದ ದನಕರ್‌ಗಳ
ಬೆನ್ನ್ ತಟ್ಟಿ ತಟ್ಟಿ ನೂಕಿತ್ ಅವುಗಳನ್ನೆಲ್ಲಾ ಹೊಳೆ ಒಳಗೆ
ಪ್ರಾಣಭಯಂದ ಈಜಿದ್ದೊ ಅವು ಮುಂದೆ – ಮುಂದೆ॥
ಆ ಹಿಂಡ್‌ಲಿತ್ತ್ ಒಂದ್ ಗಾಂಭೀರ್ಯದ ಹೋರಿ
ಆ ಹೋರಿಯೇ ಚಂದ್ರನಂತೆ ಕೆಂಪು – ಕೆಂಪಾಗಿದ್ದ ಚಂದ್ರ ಹೋರಿ॥
ಆ ಹೋರಿ ಹೊಳೆಗೆ ಹಾರಿಕಾಕನ ಹೈದ ಹಿಡ್ಟ್‌ಕಂಡತ್ ಅದರ ಬಾಲ ಬುಡನ ಗಟ್ಟಿಯಾಗಿ
ಹೊಳೆ ನೀರ್‌ನ ಅಲೆ ಎದ್ದು–ಬಿದ್ದು, ಮೇಲೆ–ಕೆಳಗೆ ಹಾರುತ್ತಿದ್ದಾಂಗೆ
ಹೈದನೂ, ಹೋರಿಯೂ ಅಲೆಗಳ ಒಟ್ಟೊಟ್ಟಿಗೆ ಮೇಲೆ–ಕೆಳಗೆ ಹಾರಿ–ಹಾರಿ,
ಎದ್ದು ಬಿದ್ದು, ಮುಂದೆ – ಮುಂದೆ ಸಾಗಿದೊ ದಂಡೆ ಕಡೆಗೆ ॥
ಅಂತೂ–ಇಂತೂ ದೇವರ ಕೃಪೆಯೋ ಅಲ್ಲ ಅವುಗಳ ದೃಢ ಸಂಕಲ್ಪವೋತ್ತೇಳುವಂಗೆ
ಸೇರಿಕೊಂಡೊ ದಡೆಯ ಆಚೆ ಕಡೆಗೆ॥
ಕಣ್ಣ್–ಬಾಯಿ ಬುಟ್ಟ್‌ಕಂಡ್ ಗಡ ಗಡ ನಡ್‌ಗಿಕಂಡ್ ನಿತ್ತ್‌ಕಂಡಿದ್ದ
ನೂರಾರು ಮನೆ ಮಂದಿ ಹೊಡ್ಡೊ ನೋಡಿ ಚಪ್ಪಾಳೆಯ ಸುರಿಮಳೆನ
ಸಿಕ್ಕಿತ್ ಇವುಕೆ ಅವರೆಲ್ಲರ ಸಂತಸದ ಸ್ವಾಗತ – ಸ್ವಾಗತ ॥
ಆದರೆ ಆ ಸಂತೋಸ ಹೆಚ್ಚ್ ಹೊತ್ತ್ ನಿತ್ತ್‌ತಲೆ,
ಯಾಕೆಂತೇಳ್ರೆ, ಈಜ್‌ಬಾರದ ಕರುಗೆಲ್ಲಾ ಹೊಳೆಲಿ ಕೊಚ್ಚಿ ಹೋಗಿದ್ದೊ!
ಬ್ಯಾನೆ ಕುದ್ದುಟು ಎದೆಯೊಳಗಿಂದೂ ಕರ್‌ಗಿ ಹೋಗದ ಕಲ್ಲಂಗೆ
ಕಣ್ಣ್ ಮುಚ್ಚಿರೂ ಕಳ್ಟದ್ ಕಂಡದೆ ನರಜಲ್ಮನೆ ಅಂತದ್

✍ಕಾವೇರಿಮನೆ ಡಾ॥ ಬೋಜಪ್ಪ

ಶ್ರೀಯುತ ಬೋಜಪ್ಪನವ್ಕೆ ಆಗ ಒಂಬತ್ತೊ–ಹತ್ತೊ ವರ್ಷ. ಎಳೆ ಪ್ರಾಯಲಿ ತನಗಾದ ಅನುಭವನ ತಮ್ಮ ಎಂಬತ್ತೊಂಬತ್ತನೇ ವರ್ಷದ ಈ ಪ್ರಾಯಲಿ ಹಿಂಗಾರಕ್ಕೆ ಅಭಿಮಾನಂದ ಬರ್ದೊಳೊ–ಸಂ.

# ಅಮ್ಮ ನೆಂಟ್ರ ಮನೆಗೆ ಹೋದ ದಿನ....

ಅಮ್ಮ ನೀ ಎಲ್ಲಿಗ್ಹೋದೆ
ಇಸ್ಕೂಲ್ಂದ ನಾ ಬಾಕನ?
    ಅಂಗಿ ಚಡ್ಡಿ ಯಾವ್ದು ಹಾಕೊಕು
    ಸಮವಸ್ತ್ರ ಎಲ್ಲಿ ಇಡೊಕಮ್ಮ?
ತಿಂಡಿ ಎಲ್ಲಿ ಪಾಠ ಹೇಂಗೆ
ಅಪ್ಪ ಒಂದೂ ಹೇಳ್ತಿಲ್ಲೆ
    ಬಟ್ಟಲು ತಟ್ಟೆ ರಾಸಿ ಬಿದ್ದುಟು
    ಅದರ ತೊಳ್ದಿಡುವುದ್ಯಾರಮ್ಮ?
ಬಿಸ್ನೀರ್ ಮೀಸಿ ಚಂಡಿ ಒರ್‍ಸಿ
ಬಟ್ಟೆಯ ತೊಡ್ಸಿದ ನನ್ನಪ್ಪ
    ಸೋಪುನ ನೊರೆಯು ನೀರಿನ ಹನಿಯು
    ಕೆಬಿಯೊಳಗುಟ್ಟು ನೋಡಮ್ಮ
ಪಾಠ ಓದ್ಸಿ, ಊಟನ ಮಾಡ್ಸಿ
ಕತೆ ಹೇಳಿ, ಮಲ್ಗಿಸುವವು ಯಾರಮ್ಮ ?
    ಬೆಳ್ಗಾರಿಗೆದ್ದು ಮೋರೆಯ ತೊಳ್ಸಿ
    ಹಲ್ಲುಜ್ಜಿಸುವವು ಯಾರಮ್ಮ ?
ಅಪ್ಪ ಮಾಡ್ದ ಹಸಿಬಿಸಿ ರೊಟ್ಟಿಗೆ
ಉಪ್ಪಿಲ್ಲದ ಪೊಜ್ಜಿ
    ನನ್ನ ತಟ್ಟೆ ಎಲ್ಲಮ್ಮಾ ?
    ಹೇಂಗೆ ತಿನ್ನಲಿ ಹೇಳಮ್ಮ ?
ಪುಸ್ತಕ ಜೋಡ್ಸಿ ಬ್ಯಾಗನು ತುಂಬ್ಸಿ
ಸ್ಕೂಲಿಗೆ ಕಳ್ಸಿಕೆ ನೀ ಬೇಗ ಬಾಮ್ಮ

✍ಸರೋಜಿನ ಗಂಗಯ್ಯ ಎಂ. ಎ.

# ನಮ್ಮ ಬಾಳ್

ಪ್ರೀತಿಯ ಸೆಳೆತಕ್ಕೆ ಸೋತೆ ಅಂದ್ ನಾನ್
ತುಂಬಿ ಹೋದಂಗೆ ಉಬ್ಬಿಕಂಡತ್ ಹೃದಯ
ಮನಸ್ಸ್‌ನ ತುಂಬಾ ಪ್ರೀತಿಯ ಗುಂಗ್
ಹೇಳಿಕೆ ಸಾಧ್ಯವಾಗದ ರೀತಿ
ನವಿರಾದ ಹೊಂಗನಸು ಹೊಮ್ಮಿಕೆ ಸುರಾತ್
ಮೆದು ನಗೆಯ ಮಾತ್
ಹೊಳೆಯ್‌ವ ಕಣ್ಣುಗ, ಮಿಡಿಯುವ ಹೃದಯ
ಸೂಸಿದೋ ಪ್ರೀತಿಯ ಬಾಳ್‌ನ
ಒಪ್ಪಿಕೊಳ್ಳುವ ಮನಸ್ಸುಗ
ಹುಟ್ಟಿಕೊಳ್ಳುವ ಕನ್‌ಸ್‌ಗ
ಒಂದಾಗುವ ಆ ದಿನಗ ಸೊಗಸ್

ಬಯಕೆ ಬೇಡಿ ಬಾಕನ
ಸಲುಗೆಯಿಂದ ಕೂಡುಕನ
ಒಂದಾತ್ ಆ ಮನಗ

ಬ್ಯಾಡದ ಮಾತು ಬೇಕಿಲ್ಲೇ ಇಲ್ಲಿ
ನಗುವೊಂದಿದ್ದರೆ ಸಿಹಿ ಬೆಲ್ಲ,
ಬೇಕಿಲ್ಲೆ ಬೇವು ಸಿಹಿ ಜೇನ್ ಇರುಕನ
ಮನಸ್ಸುನ ತುಂಬೆಲ್ಲ ಅನುರಾಗ ಹರ್‌ಡಿರ್‌ಕನ
ಕೇಳ್‌ದೆಲ್ಲ ಸಂಗೀತ, ನೋಡ್‌ದೆಲ್ಲ ಸೌಂದರ್ಯ
ಜಗವೆಲ್ಲ ಶೂನ್ಯ, ನಮ್ಮ ಬಾಳ್ ಮಾನ್ಯ

✍ಸೆಟ್ಟೇಜನ ಗೀತ ಪದ್ಮನಾಭ

# ಚಾಂಪನ ಮನೆ

ಅಂದ್ ಪರೀಕ್ಷೆ ಕಳ್ದ್ ಶಾಲೆಗೆ ರಜೆ ಬುಟ್ಟಂಗೆ
ಮಾರನೇ ದಿನನೇ ಬಸ್ ಹತ್ತಿ ಹೊರ್ಡ್ತಿದ್ದೊ ಚಾಂಪನ ಮನೆಗೆ।
ಎರ್ಡ್ ತಿಂಗ ಮಾಡ್ತಿದ್ದೊ ಬಾರಿ ಮಜಾ
ರಜಾ ಕಳ್ದ್ ಶಾಲೆ ಶುರುವಾಕನ ಅನ್ಸಿತ್ತ್ ಸಜಾ ॥
ಚಾಮೆವ್ವ ಅಕ್ಕಿ ಬೀಸಿ ಮಾಡ್ತಿದ್ದೊ ಕೈರೊಟ್ಟಿ
ಒಟ್ಟಿಗೆ ಮಾಡ್ತಿದ್ದೊ ಪಜ್ಜಿ ಹಲಸಿನಕ್ಕಿನ ಕುಟ್ಟಿ।
ಚಾಮೆವ್ವ ಅಕ್ಕಿ ಬೀಸ್‌ಕನ ಕಲ್ಲ್‌ನ ಗೂಟಕ್ಕೆ ಕೈ ಹಾಕ್‌ತಿದ್ದೊ
ಬೋಜವ್ವ ಭತ್ತ ಕುಟ್ಟ್‌ಕನ ನಾವೂ ರಾಟೆ ಮೆಟ್ಟ್‌ತಿದ್ದೊ॥
ಬೆಳಿಗ್ಗೆ ರೊಟ್ಟಿತಿಂದ್ ಮಾವನೊಟ್ಟಿಗೆ
ಹೋಗ್‌ತಿದ್ದೊ ಬಾಣೆ – ತೋಟದ ಕಡೆಗೆ ।
ಕೊಯ್ಯಕೆ ತೋಟಲಿದ್ದ ಅಮೆ, ಕೂಮೆ, ಇಡ್‌ಂಜಿ ಹಣ್ಣ್
ಬಾಣೆಲಿದ್ದ ಗೊಟ್ಟೆ, ನೇರಳೆ, ಪೇರಳೆ ಹಣ್ಣ್॥
ಪ್ಯಾಟೆಲಿ ಸಿಕ್ಕುವ ಸೇಬು ದ್ರಾಕ್ಷಿ ಎಲ್ಲಾ
ಈ ಹಣ್ಣ್‌ಗಳ ಮುಂದೆ ಏನೇನೂ ಇಲ್ಲೆ ।
ಯಾವ್ದೇ ಕ್ರಿಮಿನಾಶಕ, ಚುಚ್ಚುಮದ್ದ್ ಇಲ್ಲೆ
ಇಂದ್‌ನ ಮಕ್ಕಳಿಗೆ ಇಂತ ಹಣ್ಣ್‌ಗ ಗೊತ್ತೇ ಇಲ್ಲೆ॥
ಇಂದ್ ಶಾಲೆಗೆ ರಜೆ ಬುಟ್ಟಂಗೆ
ಟಿವಿ–ಮೊಬೈಲ್–ಬ್ಯಾಸಿಗೆ ಶಿಬಿರ ಬುಟ್ಟ್ ಎಲ್ಲಿಗೆ।
ಹೋಕೆ ಇಷ್ಟಪಡ್ತುಲೆ ಮಕ್ಕ
ಅಪ್ಪ–ಅವ್ವಂಗೂ ಅವ್ರ ಗಲಾಟೆ ತಪ್ಪಿದೆ ಪಕ್ಕಾ॥
ಮಕ್ಕಳ ವರ್ಷಕ್ಕೊಮ್ಮೆಯಾದರೂ ಹಳ್ಳಿಗೆ ಕಳ್ಸಕು
ಅವ್ಕೂ ಹಳ್ಳಿ ಜೀವನದ ಅನುಭವ ಇರಕು ।
ಚಾಂಪ ಚಾಮೆವ್ವಂಗೂ ಮೊಮ್ಮಕ್ಕಳ ಸಂಗ ಬೇಕ್
ಹಳೆ ಬೇರ್ ಹೊಸ ಚಿಗುರ್ ಕೂಡಿರೆ ಲಾಯಕ್ ॥

✍ಕಟ್ರತನ ಲಲಿತಾ ಅಯ್ಯಣ್ಣ

# ಈಗನ ಮೊನ್ಸ

ಎಲ್ಲವ್ ತೊಪ್ಪು ಮಾಡ್ವೆ
ಕೆಲವ್ ಜನ ತೊಪ್ಪುಗಳ ಪ್ರಸ್ನೆ ಮಾಡ್ವೆ
ಜನರ ನಡ್ವಳಿಕೆನ ಅರಿವ್‌ನ ಕೊರ್‌ತೆಂದಾಗಿ
ಸಂಬಂಧಗಳ್‌ಲಿ ಯಾವ್‌ದೇ ಬೆಳ್ವಣಿಗೆ ಇಲ್ಲೆ
ಒಬ್ಬರ ಗುಲಾಮಾಗಿ ಇರ್ಕೆ ಯಾರೂ ತಯಾರಿಲ್ಲೆ
ಕಿತ್ತು ತಿನ್ನೊ ಬಡ್‌ತನ ಇದ್ದೊರೂ ಸಹ
ಯಾಕೇಂತ ಹೇಳ್ರೆ, ಎಲ್ಲೊವ್ ಪ್ರಯತ್ನ ಮಾಡ್ದು
ಅವ್ರವ್ರ ಕಾಲ್‌ಮೇಲೆ ನಿಲ್ಲೊಮೋಂತ
ಒತ್ತೊಡನ ತಪ್‌ಸಿಕೆ, ಮಾತ್ರೆ ತಿಂದವೆ
ಆದರೆ, ಅವೆ ನಾಸ ಆಗ್ತೊಳೊ ಅಂತ ಮರ್ತವೆ
ನಾಲ್ಗೆ ಮೇಲೆ ಹಿಡ್‌ತ ಇಲ್ಲದೆ ಮಾತಾಡಿ
ಅವ್ರತನನ ಪೂರ್ತಿ ಕಳ್ಕಂಡವೆ
ತಿಳ್ದವ್ ಹೇಳ್ವ ಕೆಬಿ ಮಾತಿಗೆ ಬೆಲೆ ಕೊಡಿಕೆ ಮನ್ಸಿಲ್ಲೆ
ಅದ್ಕೆ, ಅವ್ ಕಸ್ಟ–ನಸ್ಟಗಳ ಎದ್ರುಸುವೆ
ಅವ್‌ಮಾನನ ತಪ್ಪಿಸಿಕಂಬಕೆ
ಬೇರೆಯವ್ರ ತೊಪ್ಪು ಕಂಡ್‌ಹಿಡ್ಯುವ ಕೆಲ್ಸ ಮಾಡ್ವೆ
ಈಗನ ಮೊನ್ಸಂಗೆ, ಸಮಸ್ಯೆನ ಪರ್‌ಸ್ಥಿತಿಲಿ
ಭಾವನೆಗ, ಅದ್ಕೆ ಸ್ಪಂದಿಸುವ ಗುಣ ಇರ್ದುಲೆ
ಅವ್ರ ಜೀವ್‌ನ ಯಂತ್ರದ್ದಾಂಗೆ ಇದೆಲ್ಲದ್ರುಂದಾಗಿ
ಸಂತೋಸ, ನೆಮ್ಮದಿನ ಜೀವ್‌ನ ನಡ್ಸಿಕಾದಾ ???

✍ರಮ್ಯಶ್ರೀ ನಡುಮನೆ

# ಗೂಡೆನ ಕಾರ್ಬಾರ್

ಮಾಯಿಲಕೋಟೆ ದಲ್ಲಾಳಿ ಹೇಳ್ತ್ ಗೂಡೆ ಬಾರಿ ಪೊರ್ಲ್
ಹಳ್ಳಿ ಹೈದಂಗೆ ಇದರ ಕೇಳಿ ಸುರು ಆತ್ ಮೊರ್ಲ್
ಚಿನ್ನ ಗಿನ್ನ ದುಡ್ಡು ಗಿಡ್ಡ್ ಬಟ್ಟೆ ಬರೆ ಬಾರಿ ಕೊಟ್ಟವೆ ಗಡ
ಮತ್ತೆ ಹೇಳ್ದೊ ಗೂಡೆನ ಕೂಡ ತಂದ್ ಕೊಟ್ಟವೆ ಗಡ ॥ 1 ॥

ದೊಡ್ಡ ಮನೆಲಿ ಬೆಳ್ದ ಹೆಣ್ಣ್ ಹಳ್ಳಿ ಕ್ರಮ ಗೊತ್ತಿಲೆ
ಅದ್ಕೆ ಇಂದ್ ಆಗಳ್ದ್ ಹೈದನ ಗಂಟ್ಲಿಗೆ "ಮಾಲೆ"
ಅವರ ತಪ್ಪು ಇಲ್ಲೆ ಶೋಭಾನೆಲಿ ಹೇಳ್ಯೋಳೊ "ಇದ್ ನಮ್ಮ ಬಾಲೆ"
'ಬಾಲೆ'ಗೆಲ್ಲಿ ಗೊತ್ತ್ ನಮ್ಮ ಮನೆನ ಒಲೆ ॥ 2 ॥

ಒಲೆಗೆ ಉರ್ಗಿ ಬೂದಿ ಹಾರ್ತ್ ಕೈಕಾಲೆಲ್ಲ ಕಪ್ಪಾತ್
ಸೌದೆ ಹೋಗಿ ಗ್ಯಾಸ್ ಬಾತ್ ಬೂದಿ ಹೋಗಿ ವಿಮ್ ಬಾತ್
ಚಿಪ್ಪಿಸೆಡೆ, ಕುಡ್ಲು, ಮರ್ಚಟೆ ಮಡ್ಲ್ ಅಟ್ಟ ಸೇರ್ತ್
ಮಿಕ್ಸಿ, ಗ್ರೈಂಡರ್, ಸ್ಟೌವ್, ಗ್ಯಾಸ್ ಮನೆ ಸೇರ್ತ್ ॥ 3 ॥

ಒಳಗೆ ರೂಮುಲಿ ಅತ್ತೆ ಪರಂಚ್‌ತಿದ್ದೊ ಸೊಸೆಗೆ
ಅವರ ತಪ್ಪು ಇಲ್ಲೆ "ನಮ್ಮ ಬಾಲೆಗೆ ಕಡೆ ಹಲ್ಲು ಬಾತ್ಲೆ"
ನೆತ್ತಿ ಎಣ್ಣೆ ಆರ್ತಲೆತ
ನಮ್ಮ ಬಾಲೆಗೆ ಕಡೆ ಹಲ್ಲು ಬಾಕನ ನಾ ಒಂದು ಗತಿ ಆವೆ ॥ 4 ॥

ಗ್ಯಾಸ್ ಹಂಡೆ ಸುಚ್ಚಿ ಹಾಕಿ ಗಂಜಿ ಬೇಸಿತ್
ಟಿ.ವಿ ಮುಂದೆ ಗೂಡೆ ಹೋಗಿ ಟಿ.ವಿ ನೋಡಿತ್
ಗಂಜಿ ಹೋಗಿ ಪಾಯ್ಸ ಆತ್, ನೀರ್ ಆರಿ ಗ್ಯಾಸ್ ಮುಕ್ತ್
ಪಾಪ! ವಿಸಿಲ್ ಹಾಕಿ ಹಾಕಿ ಸುಸ್ತ್ ಆತ್ ॥ 5 ॥

ಅಂಬುಲಿ ಉಂಡ್ ಗೆಲ್ಸ್ ತಿಂದ್ ಆಗನ ಕಾಲ ಕೆಟ್ಟತ್...
ನಮ್ಮ "ಅವು" ಹೋಗಿ ಮನೆ ಹೋತ್ ಎಲ್ಲ ಬೋಳ್ ಆತ್...
ನಿದ್ದೆಂದೆದ್ದ ಗೂಡೆ ಹೋಗಿ ಗಂಜಿ ನೀರ್ ನೋಡ್ತ್; ಎಲ್ಲಾ ಕೆಟ್ಟಿತ್.
ಹೊರಗೆ ಓಡಿ ಬಂದ ಫೋರ್ಸ್‌ಲಿ ಅತ್ತೆ ರೆಟ್ಟೆ ಬೀತ್ ॥ 6 ॥

✍ಭವ್ಯಶ್ರೀ ಕರಂಗಲ್ಲು

ಚಿಂತನೆ

## ಬೇಕ್ ದೇಶಭಕ್ತಿ

ಒಂದ್ ಸರ್ತಿ ನಮ್ಮ ಊರ್‌ಲಿ ಸತ್ಯನಾರಾಯಣ ದೇವರ ಪೂಜೆ ಒಟ್ಟಿಗೆ ಧಾರ್ಮಿಕ ಉಪನ್ಯಾಸ ನಡ್ದಿತ್. ಸಾಕಷ್ಟ್ ತಿಳ್ದ ವ್ಯಕ್ತಿ ಒಬ್ಬರ ಉಪನ್ಯಾಸ ಎಲ್ಲವರ ಮನ್ಸ್ ಮುಟ್ಟುವಾಂಗೆ ಇತ್.

ಶಬರಿಮಲೆಗೆ ಭಕ್ತರ್ ಮಾಲೆ ಹಾಕಿ ಹೋದವೆ. ಬೊದ್ಕುನ ಯಾದೊ ಒಂದ್ ಸಂಕಷ್ಟಂದ ಪರಿಹಾರನ ಕಾಣ್‌ವ ಆಸೆಂದ. ಹಂಗೆನೆ ಬೇರೆ ಬೇರೆ ಪೂಜೆ ಪುರಸ್ಕಾರಗಳ ಮಾಡುವೆ ಅದರ್‌ಂದ ನಮ್ಮ ಉದ್ದೇಶ ಈಡೇರ್ದ್‌ತೇಳ್ದು ನಮ್ಮ ಭಾವನೆ.

ದೇವರ ಪೂಜೆಗಳ ಮಾಡ್ದರ್‌ಂದ ನಮ್ಮ ಬೊದ್ಕಿಗೆ ಒಂದಷ್ಟ್ ಪಾಠ ಕಲಿವಾಂಗೆ ಆದೆ. ಬರೀ ನಮ್ಮ ಇಷ್ಟಾರ್ಥದ ಪ್ರಾಪ್ತಿ ಮಾತ್ರ ಅಲ್ಲ. ಅದರ ಒಟ್ಟಿಗೆ ತುಂಬಾ ಜನಗಳಿಗೆ ಬೊದ್ಕುನ ಪಾಟ ಕಲಿವ ಹಂಗಾದೆ. ಅದ್ ಎಲ್ಲವ್ಕೂ ಗೊತ್ತಾಗಲಿ ತೇಳ್‌ವ ಉದ್ದೇಶಂದ ಧಾರ್ಮಿಕ ಉಪನ್ಯಾಸ ನಡ್ವದೆ.

ನಮ್ಮ ದೇಶ ಎಂತದ್ ನಮ್ಮ ಪರಂಪರೆ ನಮ್ಮ ಸಂಸ್ಕೃತಿ ಎಷ್ಟ್ ಉದಾತ್ತವಾದದ್.

ನಮ್ಮ ದೇಶದ ಗೌರವ ಜಗತ್ತ್‌ನ ಉದ್ದ ಅಗಲಕ್ಕೂ ಉಟ್ಟು. ಇತ್ತೀಚೆಗೆ ನಮ್ಮ ದೇಶಕ್ಕೆ ಮಾರೀಷಸ್‌ನ ಅಧ್ಯಕ್ಷರ್ ಗೌರವಾನ್ವಿತ ಅಥಿತಿಯಾಗಿ ಬಂದಿದ್ದೊ.

ಭಾರತದ ಅಧಿಕಾರಿ ವರ್ಗದವ್ ಅಧ್ಯಕ್ಷರ ಸ್ವಾಗತ ಮಾಡಿಕೆ ನಿತ್ತಿದ್ದೊ. ಅಧ್ಯಕ್ಷರ್ ವಿಮಾನದ ಕಡೆನ ಮೆಟ್ಲ್ ಇಳಿಯಕೆ ನೋಡ್ ನೋಡ್‌ತ್ತಿದ್ದಾಂಗೆ ದೊಪ್ಪ ಅಂತ ಕೆಳಗೆ ಬಿದ್ದೊ ಅಂತ ತಿಳ್ಕಂಡ ಭಾರತದ ಅಧಿಕಾರಿ ವರ್ಗದವ್ ಅಯ್ಯೋ "ಬಿದ್ರಾ" ಅಧ್ಯಕ್ಷರ ಕೈ ಹಿಡ್ದ್ ಎದ್ರಿಸಿಕೆ ನೋಡ್ದೊ. ಆಗ ಆ ಅಧ್ಯಕ್ಷರ್:

"ರೀ ನೀವ್ ಏನ್ ಹೇಳುತ್ತಿದ್ದಿರಾ. ನಾನು ಬಿದ್ದದ್ದು ಅಲ್ಲ. ನಾನು ವಿದೇಶದವನು. ಭಾರತದ ನೆಲ ಅಂದ್ರೆ ಸರ್ವಶ್ರೇಷ್ಠ ನೆಲ. ಇಡೀ ಜಗತ್ತಿನ ಅತ್ಯಂತ ಪುಣ್ಯೋತ್ತಮವಾದ ಮಣ್ಣು ಅಂದ್ರೆ ಅದು ಭಾರತ ಮಣ್ಣು.

ರಾಮ, ಕೃಷ್ಣ ಮೊದಲಾದ ದೇವಾನು ದೇವತೆಗಳು ಓಡಾಡಿ, ಸಂಭ್ರಮಿಸಿದ ಮಣ್ಣು ಭಾರತದ ಮಣ್ಣು. ದೇವಾನು ದೇವತೆಗಳು ತಮ್ಮ ಲೀಲಾ ವೈಭವವನ್ನು ತೋರಿಸುವುದಕ್ಕೆ ಆಯ್ಕೆ ಮಾಡಿಕೊಂಡ ಮಣ್ಣು ಜಗತ್ತಿನ ಏಕ ಮಾತ್ರ ಮಣ್ಣು ಭಾರತದ ಮಣ್ಣು.

ಅಂತಹ ಭಾರತಕ್ಕೆ ನನ್ನ ಜೀವಮಾನದಲ್ಲಿ ಮೊಟ್ಟ ಮೊದಲಿಗೆ ಬರುತ್ತಿರುವೆ. ಈ ಮಣ್ಣಿನಲ್ಲಿ ಮೊದಲು ನನ್ನ ಕಾಲುಗಳನ್ನು ಇಡಬಾರದೆಂದು ಈ ಪುಣ್ಯ ಭೂಮಿಯ ಮೇಲೆ ನನ್ನ ಕೈಯನ್ನು ಇಟ್ಟು ನಮಸ್ಕಾರ ಮಾಡಿ ಪ್ರವೇಶ ಮಾಡಿದೆ ನಿಮಗೆ ಗೊತ್ತಾಗಲಿಲ್ಲ" ತ ಹೇಳ್ತ್.

ಇನ್ನೊಬ್ಬ ವಿದೇಶ ಪ್ರವಾಸಿಗ ಭಾರತಕ್ಕೆ ಬಾಕನ ಚಪ್ಪಲ್" ಹಾಕದೆ ನಡಿಯಕನ ಯಾರೊ ಒಬ್ಬ ಅಯ್ಯೊ. ನಿಮ್ಮ ಕಾಲ್‌ಲಿ ಚಪ್ಪಲ್ ಇಲ್ಲೆ ಮುಳ್ಳ್ ಹೆಟ್ಟಿದೆತ ಹೆದ್ರಿಕೆ ಆದುಲೆನಾ ತ ಕೇಳ್‌ಕನ ಆ ಪ್ರವಾಸಿಗ "ನಮ್ಮಲ್ಲಿ ದೇವರ ಕೋಣೆಗೆ ಪ್ರವೇಶ ಮಾಡುವಾಗ ಚಪ್ಪಲಿ ಹಾಕುವ ಅಭ್ಯಾಸವಿಲ್ಲ. ಭಾರತ ಎಂದರೆ ದೇವರ ಕೋಣೆ ಇದ್ದ ಹಾಗೆ ಅದಕೆ ಬೇಕಾಗಿ ಚಪ್ಪಲಿ ಹಾಕಲು ಭಯ ಆಗುತ್ತೆ."ತ ಹೇಳ್ತ್.

ನಮ್ಮ ದೇಶದ ಮೇಲೆ ವಿದೇಶದವ್ಕೆ ಗೌರವ ಇದ್ದರೂ ನಾವ್ ಏನ್ ಮಾಡ್ತ ಒಳೊ ಯಾವ ರೀತಿಲಿ ಗೌರವ ಕೊಟ್ಟವೆ ಹೇಳಿಕೆನೇ ನಾಚಿಕೆ ಆದೆ.

ಎಲ್ಲವರ ಹೇಳ್ತ ಇಲ್ಲೆ. ಕೆಲವರ ಬುಟ್ಟರೆ ಒಳ್ದವ್ ಅಗೌರವ ತೋರ್ರುವೆ. ನಮ್ಮ ದೇಶದ ಮೇಲೆ ಗೌರವ ತೋರ್‍ರೊಕ್. ಹೆಚ್ಚಾಗಿ ಸೈನಿಕರ್ ನಮ್ಮ ದೇಶದ ರಕ್ಷಣೆಗಾಗಿ ಹಗ್‌ಲ್ ರಾತ್ರೆ ನಿದ್ದೆ ಮರ್ತ್ ನಮ್ಮ ಕಾಪಾಡ್ತ ಒಳೊ.

ನಾವ್ ಮಾತ್ರ ಹೊಟ್ಟೆ ತುಂಬಾ ತಿಂದ್ ಉಂಡ್ ಮೂಕ್ ಮುಟ್ಟ ಕುಡ್ದ್ ಕುಂಬಕರ್ಣನ ಹಂಗೆ ನಿದ್ದೆ ಮಾಡಿ ಬೊಳ್ಪಿಗೆ ಎದ್ದ್ ಅನ್ಯಾಯದ ಕಡೆ ಮೋರೆ ಮಾಡ್ತ ಒಳೊ.

ನಮ್ಮ ಕಾಪಾಡುವ ಸೈನಿಕರ ಪ್ರಾಣ ಹಾರಿ ಹೋಕನ ಮಾತ್ರ ಸಂಬಂಧ ಪಟ್ಟವ್ ಒಮ್ಮೆ ಕಣ್ಣೀರ್ ಹನ್ಸ್ಕಿಸಿ ಮತ್ತೆ ಮರ್ತ್ ಕುದ್ದವೆ.

ನಮ್ಮ ದೇಶದ ಸೈನಿಕನೊಬ್ಬನ ರಾಂಚಿಲಿ ಕೈ, ಕಾಲ್, ನಾಲಿಕೆನ ಕತ್ರ್‌ಸಿ ನೆಲಬಾಂಬ್‌ನ ಮೇಲೆ ಮಲ್ಗ್‌ಸಿದೊ. ಇದ್ ಗೊತ್ತಾಗಿ ನಮ್ಮ ಸೈನಿಕರ್ ಅವನ ಬೊದ್ಕುಸುವ ಆಸೆಂದ ಹಕ್ಕಲೆ ಹೋಕನ ರಕ್ತ ಹೋಗ್ತ ಉಟ್ಟು ಚೀರಾಡ್ತ ಉಟ್ಟು. ಕೈಕಾಲ್ ನಾಲಿಕೆ ಇಲ್ಲದೆ ನನ್ನ ಮುಟ್ಟುದು ಬೇಡ ನೆಲ ಬಾಂಬ್‌ಲಿ ಮಲ್ಗ್ ಸ್ಕೊಳತ ಹೇಳಿಕೆ ಆಗದೆ, ಒದ್ದಾಡ್ತ್ ಗಡ. ಅವನ ಮುಟ್ಟಿದ ಸೈನಿಕರೂ ಪ್ರಾಣ ಕಳ್ಕಂಡೊ.

ಇಪ್ಪತ್ತೆರಡ್ ವರ್ಷದ ಮನೋಜ್‌ಕುಮಾರ್ ಪಾಂಡೆ ಇಂಜಿನಿಯರಿಂಗ್ ಓದಿರು ಪರಮ್‌ವೀರ್ ಚಕ್ರದ ಆಸೆಗಾಗಿ ಸೈನ್ಯಕ್ಕೆ ಸೇರ್ದೆ. ಅವನ ಪ್ರಾಣ ತ್ಯಾಗ ಆಕೆ ಮುಂದೆ ನನ್ನ ರಕ್ತದ ತಾಕತ್ತ್ ತೋರ್ಸಿಕೆ ಮುಂದೆ ಮೃತ್ಯು ನನ್ನ ಹಕ್ಕಲೆ ಬಂದರೆ ದೇವರ ಆಣೆಗು ಮೃತ್ಯುನ ಕೊಂದನೆ ನನ್ನ ತಾಕತ್ತ್ ತೋರ್ಸಿಯೆ

ಸತ್ತನೆ. ಪಾಕಿಸ್ಥಾನದ ಎದುರು ಯುದ್ಧ ನಡಿವ ಹೊತ್ತ್‌ಲಿ ಅವನ ಬಲ ಕೈ ತುಂಡಾಗಿ ನೇತಾಡ್ತ್ ಒಟ್ಟಿಗೆ ಇದ್ದ ಸೈನಿಕರ ಸಹಾಯಂದ ಅವನ ಸೊಂಟಕ್ಕೆ ಬಲದ ಕೈನ ಬೆಲ್ಟ್‌ಂದ ಕಟ್ಟ್‌ಸಿಕಂಡ್ ಯುದ್ಧಕ್ಕೆ ಸಿದ್ಧ ಆತ್. ಅತ್ತಂದ ತ್ಸಾಂಗಿದ ಗುಂಡ್ ಇವನ ಹಣೆಗೆ ತಾಂಗಿ ಬಿದ್ದ್ ಹೋದರೂ ಭಾರತದ ಧ್ವಜ ಹಿಡ್ದೇ ಪ್ರಾಣ ಬುಟ್ಟತ್.

ಪರಮ್‌ವೀರ್ ಚಕ್ರನ ಅವನ ಅಮ್ಮ ಸ್ವೀಕಾರ ಮಾಡಿ "ನನ್ನ ಮಂಜತ ನೆನ್ಸಿದೆ. ಬರೀ ನನ್ನ ಮಂಜ ಅಲ್ಲ ನಮ್ಮ ದೇಶದ ಮಂಜತ ಈಗ ಗೊತ್ತಾತ್. ನಾ ಯಾಕೆ ಕಣ್ಣ್‌ನೀರ್ ಬುಡ್ದು"ತ ಹೇಳ್ತ್.

ಅಮುಲ್ ಖಾಲಿ, ಅಮುನ್ ಖಾಲಿ, ಅಣ್ಣ ತಮ್ಮ ಇಬ್ಬೊರು ಸೈನ್ಯಕ್ಕೆ ಸೇರ್‍ದ್ದೊ. ಅಣ್ಣಂಗೆ ಮೊದುವೆ ಆಗಿತ್ತ್. ತಮ್ಮ ಅಮುಲ್‌ಖಾಲಿಗೆ ಮೊದುವೆ ನಿಶ್ಚಯ ಆಗಿತ್ತ್. ಕಾರ್ಗಿಲ್ ಯುದ್ಧಲಿ ಪ್ರಾಣ ತ್ಯಾಗ ಮಾಡ್ತ್. ಹೆಣದ ಎದುರ್ ಕುದ್ದ ಅಯ್ಯೆ ಎಲ್ಲವ್ ನಿನ್ನ ಕಿರಿ ಮಗತ ಕರೆತ್ತಿದ್ದೊ ಆದ್ರೆ ನೀ ಕಿರಿಮಗ ಅಲ್ಲ. ದೇಶದ ಹಿರಿ ಮಗತ ಹೇಳ್ತ್.

ಇತ್ತೀಚೆಗೆ ಹಾಸನದ ಸಂದೀಪ್ ಹುತಾತ್ಮ ಆತ್. ಆಗ ಅವನ ಅಪ್ಪ ನಾನೇ ಸೈನ್ಯಕ್ಕೆ ಸೇರಕಾಗಿತ್ತ್. ಅದ್ ನನ್ನಿಂದ ಆತ್ಲೆ. ಆದ್ರೆ ನನ್ನ ಮಂಜ ಸೈನ್ಯಕ್ಕೆ ಸೇರಿ ಪ್ರಾಣತ್ಯಾಗ ಮಾಡ್ತ್. ನನ್ನ ಆಸೆ ಈಡೇರ್‌ತ್ತ ಹೇಳ್ತ್. ನಿಜವಾಗಿ ನಮ್ಮ ದೇಶದ ಮೇಲೆ ಗೌರವ ಇರ್‍ದು ಇಂತವ್ಕೆ ಮಾತ್ರ.

ನಮ್ಮ ಮಕ್ಕಳಿಗೆ ದೇಶದ ಮೇಲೆ ಗೌರವ ಹುಟ್ಟೊಕು. ದೊಡ್ಡ ವ್ಯಕ್ತಿಗ ಆಕು. ರಾಷ್ಟ್ರಕ್ಕೆ ಉಪಯೋಗ ಆಗುವಂತ ಮಕ್ಕಳಾಗಿ ಬೆಳಿಯೊಕು. ಕಬ್ಬಿಣದಂತ ಮಾಂಸಖಂಡ ಬರ್‍ಲಿ. ಉಕ್ಕಿನಂತ ನರಮಂಡಲ ಹುಟ್ಟಲಿ, ಮಿಂಚ್‌ನಂತ ಬುದ್ಧಿ ಶಕ್ತಿ ಬರ್‍ಲಿ.

ಅದ್ಕನೆ ಕವಿಗ ಹೇಳ್ದ್.

॥ ಹಿಂದು ಸ್ಥಾನವು ಎಂದೂ ಮರೆಯದ
ಭಾರತ ರತ್ನವು ಜನ್ಮಿಸಲಿ॥

✍ಉದಯಕುಮಾರಿ ಚೆಂಬು

# ಪದ–ಪದಾರ್ಥಗ

<u>ಅಕ್ಷರ :</u> ಇದಿಕ್ಕೆ ಕ್ಷರ–ನಾಶ ಇಲ್ಲದ್‌ಟ್ ತೇಳುವ ಅರ್ಥ. ಅಕ್ಷರಗ ನಾಶವಿಲ್ಲದವು. ಅವು ತಾವೂ ನಾಶವಾಗದೆ ಅವುಗಳ್‌ನ ಉಪಯೋಗಿಸಿ ರಚಿಸಿದ ಶಾಸನಗ, ಕಾವ್ಯಗ, ಶಾಸ್ತ್ರಗ ನಾಶವಾಗದ ಹಾಗೆ ರಕ್ಷಿಸಿದೆ. ಅಕ್ಷರಕ್ಕೆ ಅಂಥ ಶಾಶ್ವತ ಗುಣ ಉಟ್ಟು. ಅಕ್ಷರಕ್ಕೆ ಎರ್‌ಡ್ ರೂಪ ಉಟ್ಟು. 1. ಶ್ರವಣ 2. ಚಾಕ್ಷುಷ. ಬಾಯಿಲಿ ಉಚ್ಚರಿಸಿದ ಅಕ್ಷರ ಶ್ರವಣ. ಅದನ ನಾವು ಕೇಳುವೆ. ಬರಹದ ಅಕ್ಷರ ಚಾಕ್ಷುಷ. ಏಕೆಂದರೆ ಅವುಗಳ್‌ನ ನಾವು ನೋಡುವೆ. ಇದಲ್ಲದೆ ಸಂಸ್ಕೃತಲಿ ಅಕ್ಷರ ಪದಕ್ಕೆ 15 ಅರ್ಥ ಉಟ್ಟು. ವಿಷ್ಣು, ಶಿವ, ಬ್ರಹ್ಮ, ಓಂಕಾರ, ಧರ್ಮ, ಪ್ರಕೃತಿ, ಯಾಗ, ತಪಸ್ಸು. ಹೀಂಗೆ ಬಹು ಅರ್ಥ ತುಂಬಿದ ಶಬ್ದ ಅಕ್ಷರ.

<u>ಅಂಬಿಲ :</u> ಅಂಬಲಿತೇಳುದು ಒಂದು ದೇಶ್ಯಶಬ್ದ. ಅಂಬಲಿ ಪದಕ್ಕೆ ಅಂಬಲ, ಅಂಬಲಿ, ಅಂಬಿಲೆತೇಳುವ ಪರ್ಯಾಯ ರೂಪಗ ಒಳೊ. ಬೇರೆ ಬೇರೆ ಪ್ರದೇಶಗಳ್‌ಲಿ ಇದ್ ಒಂದು ಬಗೆನ ಅಡಿಗೆ ಪದಾರ್ಥ.. ರಾಗಿ ಹಿಟ್ಟ್, ಗೋಧಿ ಹಿಟ್ಟ್, ಜೋಳದ ಹಿಟ್ಟ್, ಅಕ್ಕಿ ಮುಂತಾದವುಗಳ್‌ಂದ ತಯಾರ್‌ಮಾಡ್‌ದ ಗಂಜಿ, ಅನ್ನನ ಬೇಸಿದಾಗ ಬಸಿದು ಬಂದ ಗಂಜಿ, ಒಂದು ವಚನ ಹೀಂಗೆ ಉಟ್ಟು, 'ಬೆಣ್ಣೆಯ ನೇಮ, ಬೆಲ್ಲದ ನೇಮ, ಅಂಬಲಿಯ ನೇಮದವರನಾರನೂ ಕಾಣೆ'. ಇದಿಕ್ಕೆ ಇನ್ನೊಂದು ಅರ್ಥನೂ ಉಟ್ಟು. ಅಕ್ಕಿನ ತೊಳ್‌ದ ಕಲಗಚ್ಚು.

<u>ಅಗಪೆ :</u> ಇದ್ ಅಡಿಗೆನ ವಿಚಾರನ ಕುರ್‌ತ್ ಮಾತಾಡ್‌ಕನ ಬರುವ ಪದ. ಈಗ ಇದ್ ಆಡ್‌ಮಾತ್‌ಂದ ಮರೆ ಆಗುಟು. ಇದಿಕೆ ಮರಲಿ ಮಾಡ್‌ದ ಸೌಟು ಎಂದರ್ಥ. ಹಿಂದಿನ ಕಾಲಲಿ ಎಳೆ ತೆಂಗಿನಕಾಯಿನ ಚಿಪ್ಪಿಂದ ಬೆಳ್ಳಗಿರುವ ಬಟ್ಟ್‌ಲ್‌ನ ಆಕಾರದ ಕರಟನ ತಯಾರಿಸಿ ಅದಿಕ್ಕೆ ಮರದ ಕಡ್ಡಿಂದ ತಯಾರಾದ ಕಾವುನ ಸೇರಿಸಿ ಸೌಟ್‌ನ ಮಾಡುತ್ತಿದ್ದೊ. ಇದನ್ನ ಸಟ್ಟ್‌ಗ, ಕೈವಟ್ಟಲ್ ತೇಳುವ ಹೆಸ್‌ರೂ ಉಟ್ಟು. ಸಾಮಾನ್ಯವಾಗಿ ಇವು ಲೋಹದ ಪಾತ್ರೆಗೆ ಅನ್ವಯ ಆದೆ. ಅಗಪೆ – ಕರಟದ್ದ್ ಸಣ್ಣ ಆಕಾರದ್. ಎಣ್ಣೆಲಿ ಬೇಯುವ ಪದಾರ್ಥಗಳ್‌ನ ತಿರ್‌ಗ್‌ಮುರ್‌ಗ ಮಾಡಿಕೆ ಉಪಯುಕ್ತ.

✍ಡಾ. ಕೋರನ ಸರಸ್ವತಿ ಪ್ರಕಾಶ್

ಆಧಾರ – 'ಇಗೋ ಕನ್ನಡ' ಪ್ರೊ. ವೆಂಕಟ ಸುಬ್ಬಯ್ಯ

## (ಹರಟೆ) ಮಳೆಗಾಲದ ವಿಶೇಷ ವಸ್ತುಗಳ ಬಗ್ಗೆ ಮಾತ್‌ಕತೆ.

ಪುಷ್ಪ : ಕೊಡ್‌ಗ್‌ಲಿ ಮಳೆಗಾಲ ಸುರಾದರೆ ಸಾಕ್. ಇಲ್ಲಿನ ಹೆಣ್ಮಕ್ಕ ರುಚಿ ರುಚಿ ತಿಂಡಿಗಳ್‌ನ ಮಾಡಿಕೆ ಸುರು ಮಾಡ್ದು ಹಿಂದೆಂದಲೇ ರೂಡಿಂದ ಬಂದುಟು.

ಗಂಗು: ಅದರ್‌ನ ಎಂತತ ಹೇಳ್ರೆ ಒಂದಾ ಎರ್‌ಡಾ? ದಿನಯಿಡೀ ಹೇಳಕ್. ಹೌದು. ಈಗಿನವ್‌ಕೆ ಅದೆಲ್ಲಾ ಮಾಡಿಕೆ ಪುರ್‌ಸೊತ್ತುನುಯಿಲ್ಲೆ. ಗೊತ್ತುನುಯಿಲ್ಲೆಂತೇಳಕ್. ಯಾಕೆಂತೇಳ್‌ರೆ ಕೈಲಿ ಯಾಗೊಳು ಮೊಬೈಲ್. ಹಂಗಾಗಿ ಬಾಯಿಗು ಕೆಮಿಗು ಪುರ್‌ಸೊತ್ತೆಯಿಲ್ಲೆ. ನೀವೇನ್ ಹೇಳ್ರೆ?

ಪುಷ್ಪ : ಕಂಡಿತಾ ಹೌದು! ಅದ್‌ಕೇನೂ ಮಾಡಿಕಾದುಲೆ ಬುಡಿ. ಈಗ ನಾವು ಮಳೆ ಬಿದ್ದಮ್ಯಾಲೆ ಹುಟ್ಟುವ ಬೆಧ್‌ರ್ ಕಣ್‌ಲೆ ಬಗ್ಗೆ ಮಾತಾಡೊನ. ಬೆದ್‌ರ್ ಹೆಚ್ಚಾಗಿ ಹೊಳೆಕರೆಲಿ ಸಾಮಾನ್ಯವಾಗಿ ಬೆಳೆವ ಸಸ್ಯಜಾತಿ. ಇದ್‌ಕೆ ಮುಳ್ಳು ಬೆದ್‌ರ್‌ತ್ ಹೇಳ್‌ವೆ. ಇದರ ಬುಡಲಿ ಬರ್‌ವ ಕಣ್‌ಲೆ ಬಾರಿ ರುಚಿ. ಈ ಕಣ್‌ಲೆ ಇಂದ್ ಮಾರ್ಕೆಟ್‌ಲಿ ಬಾರಿ ಮಾರಾಟ ಆಗ್ತಾವುಟ್ಟು. ಅದರೊಟ್ಟಿಗೆ ಮಲೆಕಾಡ್‌ಲಿ ಬೆಳೆವ ವಾಟೆ ಕಣಲೆ ಸಹ ಸಿಕ್ಕಿದೆ. ಹಿಂದೆ ಹಂಗಲ, ಕಣ್‌ಲೆ ಹುಡ್‌ಕಿಕೆ ಹೋದು ಅದರ್‌ನ ತಂದ್ ಎಲ್ಲವು ಸೇರಿಕಂಡ್ ಕೊಯ್ಯೊದೇ ವಿಶೇಸಾಗಿತ್ತ್.

ಗಂಗು: ಕಣ್‌ಲೆನ ಕೊಯ್ದ್‌ತಂದ್ ಬೆಳ್‌ದ ತೊಪ್ಪೆನ ತೆಗ್‌ದ್ ಎಳ್‌ತಾದ ಚಿರಿನ ಸಣ್ಣ ಕೊಚ್ಚೊಕು. ಇಲ್ಲರೆ ಹರ್‌ತಾದ ಕತ್ತಿಲಿ ತೆಳ್ಳಂಗೆ ಕತ್ರ್‌ಸಿ ಪಾತ್ರಕೆ ಹಾಕಿ ಎರಡ್ ದಿನ ನೀರ್‌ಲಿ ಮಡ್ಗೊಕು. ಇದರ್‌ಲಿ ಒಂತರ ಕಂಹಿಯಿದ್ದದೆ. ಅದರ್‌ನ ಇಷ್ಟ ಇಲ್ಲರೆ ಸೊಲ್ಪ ಉಪ್ಪು ಹಾಕಿ ಸುರುಲೆ ತೊಳ್ದ್ ತೆಗೆಕು. ಇಲ್ಲರೆ ಹಿಂಡಿ ಬೇಯ್‌ಸ್‌ಕಾಕನ ಒಂದೆರಡ್ ಕೊದಿ ಬರ್‌ಸಿ ನೀರ್ ಚೆಲ್ಲಿರೂ ಆದೆ. ಬೇಯಕನ ಉಪ್ಪು ಮೆಣ್‌ಸ್ ಹೊಡಿ ಅರ್‌ಶ್‌ಣ ಹಾಕಿ ಬೇಯ್‌ಸಿ ತೆಂಗ್‌ನಕಾಯಿ ಮಸಾಲೆ ಹಾಕಿ ಬೆಳ್ಳುಳ್ಳಿ ಒಗ್ರಣೆ ಕೊಟ್ರೆ ತುಂಬಾ ರುಚಿಯಿದ್ದದೆ. ಅಗ್ರಣೆಗೆ ಬೆಳ್ಳುಳ್ಳಿ ನಾಲ್ಕೈದ್ ಎಸ್‌ಳ್ ಕರಿಬೇವು ಸೊಪ್ಪು, ಸಾಸಿವೆ ಮ್ಯಾಲೆ ಕಾಣ್‌ತಿದ್ದರೆ ಲಾಯ್ಕ, ತಿಂಬಕನ ತುಪ್ಪ ಹಾಕಣಕು. ಅಕ್ಕಿರೊಟ್ಟಿ ಕಣ್‌ಲೆ ಗ್ಯೆಪು ಮಾಡ್ರೆ ಯಾವ ಗದ್ದಳಕ್ಕೂ ಕಮ್ಮಿ ಇರ್‌ದುಲೆ. ಬಂದ ನೆಂಟ್ರಿಗೆ ಗಮ್ಮತ್ತ್

ಊಟನೂ ಆದೆ.

ಅದ್‌ಕೆ ಗಾದೆನೆವುಟ್ಟು ರೊಟ್ಟಿಗೆ ಬುಟ್ಟ ಓಟ್ಟಿಲ್ಲೆ ಕಣ್‌ಲೆ ಗೈಪುಗ ಬುಟ್ಟ ಗದ್ದಳಯಿಲ್ಲೆತ!

ಪುಷ್ಪ : ಅದರ ತೊಪ್ಪಿನ ನೀರ್‌ನ ಒಂದೇ ಕಡೆ ಬಿಸಾಡೊಕು. ಪ್ರಾಣಿಗ ಕುಡೆಕಾಗದ್ ಸತ್ತ್ ಹೋದವೆತೇಳ್ವ ಮಾತುಟ್ಟು. ಸಾಧಾರಣವಾಗಿ ಅಗೆ ನಾಟಿ ಕೆಲ್‌ಸಲಿ ಗದ್ದೆಲಿ ಹೇಳ್‌ತಿದ್ದ ಮಾತ್ ಗ್ಯಾನಾದೆ. ಇಂದ್ ಕಣ್‌ಲೆ ಗೈಪು, ಒಬ್ಬೊಬ್ಬ ಆರೇಳ್ ರೊಟ್ಟಿ ತಿಂದೊತ. ಇಂದ್ ಕಣ್‌ಲೆ ಸಿಕ್ಕಿದ ಕುಸಿಲಿ ನಗರ ಪ್ರದೇಶಲಿ ಇರ್‌ವ ಮಕ್ಕಳಿಗೆ ನೆಂಟ್ರ್‌ಗೆ ಪಾರ್ಸಲ್ ಸನ ಹೋದೆ.

ಗಂಗು: ಹೌದಕ್ಕ ಹೌದು. ಆದರೆ ಕೆಲ್‌ವಕೆ ಅದರ ವಾಸನೆ ಓಡ್ಸುದುಲೆ ಕ್ವಾಂಬರೆದ ಎದ್ದ್ ಬಾಕನ ವಾಂತಿ ಬಂಧಂಗೆ ಬಾಯಿಬಡ್ಕಂಡೇ ಬಂದವೆತ. ಹೌದು. ಎಸ್ಟ್ ವಿಧವುಟ್ಟು ಅದರ್‌ಲಿ ಯಾವ್‌ದೆಲ್ಲಾ ಬೆದ್ರ್‌ಲಿ ಉಪಯೋಗ್ಸಕ್?

ಸಾಮಾನ್ಯಾಗಿ ಮುಳ್ಳು ಬೆದ್‌ರ್ ಕಣ್‌ಲೆ ತಿಂಬಕೆ ಬಾರಿ ರುಚಿಯಾಗಿದ್ದದೆ. ಇನ್ನ್ ನೆಟ ಕೆಲ ಹಸ್‌ರ್ ಬೆದ್‌ರ್‌ನ ಕಣ್‌ಲೆಸ ತಿನಕ್. ರಂಗ್‌ನ ಅರ್‌ಶನ ಬೆದ್‌ರ್‌ನ ಚಪ್ಪರಕ್ಕೆ ಉಪಯೋಗ್ಸುವೆ. ಚಿರಿನ ತಿಂಬದುಯಿಲ್ಲೆಂತೇಳಕ್,

ಈಗ ಬೆದ್‌ರ್‌ನ ರುಚಿ ಕೇಳಿ ಆತ್. ಆದರೆ ಅಂತಹ ವಿಶೇಷಾದ ಬೆದ್‌ರ್‌ಲಿ ಹೂ ಬುಟ್ಟದೆ ಅದಕೆ ಕಟ್ಟೆಬಾದುತ ಹೇಳುವೆ. ಆಗ ಇಡೀ ಕಾಡ್ ಬೆಂಕಿ ಓಡ್‌ದ್ ಕಾಡ್ ನಾಸ ಆದೆ.

ಪುಷ್ಪ : ಇನ್ನ್ ಮಳೆಗಾಲ ಏನೇನ್ ವಸ್ತ್‌ಗ ಸಿಕ್ಕುವೆಂತೇಳಿ ವಿವರಾಗಿ ಹೇಳ್ನಿ.

ಮಳೆ ಬಿದ್ದ ಸುರುಲಿ ಗುಡುಗು ಬರ್‌ವ ದಿನಗಳ್‌ಲಿ ಅಳ್‌ಂಬು ಹುಟ್ಟುದುಟ್ಟು, ಸುರುಗೆ ಅರೆಬಾಸೆಲಿ ಹೇಳ್‌ವ ನಾಯಿಮರಿ ಅಳ್‌ಂಬು, ಹರಳ್ ಅಳ್‌ಂಬು, ಸುಳೆರಿ ಅಳ್‌ಂಬು, ಬೆಳಂಜಿರ್ ಅಳ್‌ಂಬು, ಹೆಗ್ಗ್‌ಲ್ ಅಳ್‌ಂಬು, ಕಲ್ಲ್ ಅಳ್‌ಂಬು, ಮರ ಅಳ್‌ಂಬು, ಬ್ಯಾರೆ ಬ್ಯಾರೆ ಸಮೆಲಿ ಸಿಕ್ಕಿದೆ. ಮಳೆಗೆ ಗೊರ್‌ಗ ಹಾಕಂಡ್ ಕೈಲಿ ಕತ್ತಿ ತಕಂಡ್ ಕೆಲು ಜೆನ ಹೊತಾರೆ ತಿರ್‌ಗಾಡಿಕೆ ಸುರುಮಾಡುವೆ. ಅದ್ ಮಳೆಗಾಲದ ಕುಸಿಲಿವೊಂದು. ಹೆಂಗೂ ಅವು ಬಾಕನ ಏನಾರ್

ಮನೆಗೆ ತಂದೇ ತಂದವೆ. ಈ ತರ ಅಳ್ಂಬುಗ ಏಳ್ದು ಪ್ರಕೃತಿನ ಆಶ್ಚರ್ಯಂತೇಳಕ್. ಮರಗಳ್‌ಲಿ ಮಳೆ ಕಮ್ಮಿ ಆದಂಗೆ ಸುರಾದೆ. ಪ್ರತಿವರ್ಸ ಅದೇ ಸಮೇಲಿ ಸಿಕ್ಕ್‌ಕಾಕನ ಆ ದಿನ ತಿಂಗಳ್‌ನ ಬರ್‌ದಿಟ್ಟ್‌ಕಂಡ್ರೆ ವಳ್ಳದ್. ಕೆಲುಸಲ ಜಾಗ ಮರನ ಸ ಗ್ಯಾನ ಮಾಡ್‌ಕಣಕು. ಕೆಲು ಅಳ್ಂಬುಗಳ್‌ನ ಉಪಯೋಗ್ಸುದುಲೆ.

ಗಂಗು: ಇನ್ನೊವುಟ್ಟಲೆ ಆಟಿಸೊಪ್ಪು. ಸದಾ ಗದ್ದೆಲಿ ಮಳೆಲಿ ದುಡಿವ ರೈತಂಗೆ ಮೈಕೈ ಬ್ಯಾನೆಗೆ ಮದ್ದ್ ಹೌದು. ಹಂಗಾಗಿ ಇದರ್‌ನ ಮದ್ದ್ ಪಾಯಸ ಅಂತನೂ ಹೇಳ್ವೆ. ಆಟಿ ಹದ್‌ನೆಂಟರಂದ್ ಸೊಪ್ಪು ತಂದ್ ಗಂಟ್ ಮುರ್ದ್ ಲಾಯ್ಕತೇಳ್ರೆ ಮೂರ್‍ನಾಕ್ ಸಲ ತೊಳೆಕು. ಮತ್ತೆ ಕಳ್‌ಸಿಗೆಲಿ ಬೇಯ್‌ಸಿರೆ ಗಮಗಮಂತೇಳಿ ಸುವಾಸನೆ (ಪರಿಮಳ) ಅಲ್ಲೆಲ್ಲಾ ಹರ್‌ಂಡಿದೆ. ಬೇಯ್ಸ್‌ಕಾಕನ ಐದ್ ಅರ್‌ಶಣ ಎಲೆ, ಐದ್ ಚಗ್‌ತೆ ಸೊಪ್ಪುಸ ಹಾಕಕ್‌ತ ಹಿರಿಯ ಅಭಿಪ್ರಾಯ.

ಬೇಯ್‌ಸದೆ ಮಾಡೊಕುತಾದರೆ ಪಾತ್ರದೊಳಗೆ ನೀರ್ ಹಾಕಿ ಮಡ್ಗಿರೆ ನಿಧಾನ ಸೊಪ್ಪುನ ರಸ ಬುಟ್ಟ್ ನೀಲ ರಂಗಾದೆ. ನೀರ್ ತೆಗ್ದ್ ಅದೇ ನೀರ್‌ಂದ ಅಕ್ಕಿನ ತೊಳ್ದ್ ಪಾಯ್‌ಸಕ್ಕೆ ಬೇಯಕೆ ಹಾಕೊಕು. ಆಗ ಅದರ ರಂಗ್ ಹಂಗೆಯಿದ್ದದೆ. ಇದರ ಒಟ್ಟಿಗೆ ರಸಬಾಳೆ, ಅಲ್ಲರೆ ಕದೊಳಿಬಾಳೆ, ಮರಬಾಳೆಣ್ಣ್, ಕಾಡ್‌ಜೇನ್, ಹಸ್‌ನ ತುಪ್ಪ ಹಾಕಿ ಉಪಯೋಗ್ಸಕು. ಹಿಂದೆನವು ಕತ್ತಲೆಗೆ ನೀರ್ ತೆಗ್ಗ್ ಹೊತಾರೆ ನಾಕ್ ಗಂಟೆಗೆ ಎದ್ದ್ ಪಾಯ್‌ಸ ಮಾಡಿ ಬಾಳ್ಲೆಲಿ ಹಾಕ್ಕಂಡ್ ಉಂಡ್ ಸೊಲ್ಪ ಹೊತ್ತು ಮಲ್‌ಗಿ ಏಳ್‌ತಿದ್ದೊ.

ಪುಷ್ಪ : ಅಯ್ಯೋ ಈಗೆಲ್ಲಾ ಹಂಗೆ ಯಾರೂ ಮಾಡ್ದುಲೆ. ಎಷ್ಟೊ ಹೊತ್ತಿಗೆ ಊಟ, ಏಳುದು ಎಷ್ಟೊತ್ತಿಗೊ. ಏನೇ ಆದ್‌ರೂ ನಮ್ಮ ಪದ್ಧತಿನ ತಿಳ್ಕಣಕು. ಮುಂದಿನ ಪೀಳಿಗೆಗೆ ತಲ್‌ಪ್‌ಸೊಕು. ಇನ್ನೆಂತದ್ ಬಾಕಿ ಸೊಪ್ಪು ಏನಾರ್‌ವುಟ್ಟಾ?

ಗಂಗು: ಇನ್ನ್ ಸ್ವಾಣತಿಂಗ ಮಾತ್ರ ತಿನ್ನುವಂತ ಮರಕೆಸ. ಮಳೆ ಬಂದಮ್ಯಾಲೆ ಪಾರೆಕಲ್ಲ್‌ಗಳ್‌ಲಿ ಮರಗಳ ಮ್ಯಾಲೆ ಹುಟ್ಟಿ ಬರ್‌ವ ಮರಕೆಸದ ದಂಟ್‌ನ ನಾರ್‌ತೆಗ್ದ್ ಇಲಾತ್‌ಕಾಳ್ ಹೊರ್ದ್ ವಡ್ದ್ ಹಾಕಿ ಮಸಾಲೆಹಾಕಿ ಮಾಡ್ದ ಗೈಪುಗೆ ಬೆಳ್ಳುಳ್ಳಿ ಅಗ್ರಣೆ ಕೊಟ್ರೆ ಸಾಕ್. ಅದರ ರುಚಿನೆ

ಬ್ಯಾರೆ. ಅದರ ಎಲೆಗಳ್‌ನ ತೊಳ್ದ್ ಸಣ್ಣಂಗೆ ಕತ್ರಿಸಿ ಅಕ್ಕಿನೊಟ್ಟಿಗೆ ಸಂಬಾರ ಹಸಿಮೆಣ್ಸ್ ಹುಣ್‌ಸುಳಿ ಮತ್ತೆ ನಮ್ಮ ರುಚಿಗೆ ಬೇಕಾದ ಹೊರ್‌ದ ಹೆಸರ್ ಕಾಳ್ ಮಸಾಲೆ ಹಾಕಿ ಕಲ್ಲ್‌ಲಿ ಕಡ್‌ದ್ (ಮಿಕ್ಸಿಲಿ) ಬಾಳ್ಲೆಲಿಲಿ ಇಲ್ಲರೆ ಅರ್‌ಶಣ ಸೊಪ್ಪುಗೆ ಹಾಕಿ ಮಡ್‌ಚಿ ಕಳ್‌ಸಿಗೆಲಿ ಬೇಯ್‌ಸಿ ತಣ್‌ದಂಗೆ ಹಿಟ್ಟ್‌ನ ಸಣ್ಣ ಹೋಳು ಮಾಡಿ ಎಣ್ಣೆಗೆ ಹಾಕಿ ತಿನ್ನಕ್. ಅಲ್ಲರೆ ಉಪ್ಪಿಟ್ಟ್ ಮಾಡಕ್. ಕೆಸ ತೊರ್ರುದು ಜಾಸ್ತಿ. ಅದ್ಕೆ ಹುಳಿ ಅಂಶ ಜಾಸ್ತಿತೇಳ್ರೆ ನಿಂಬುಳಿ ಹಾಕೊಕು. ರುಚಿನು ಇದ್ದದೆ ಬಾಯಿನು ತೊರ್ರುದುಲೆ. ಹಿಂದೆಲ್ಲಾ ಆಟಿ ಹದ್‌ನೆಂಟರಂದ್ ಪಾಯಸ ಮಾಡಿ ಮ್ಯಾಲೆ ರುಚಿಗೆ ಎರಡ್ ಮೂರು ಸಲ ಮಾಡ್ದು ಮತ್ತೆ ಸ್ವಾಣ ತಿಂಗ ಬಾಕನ ಮರಕೆಸದ ಪತ್ರೊಡೆ ಮಾಡ್ತಿದ್ದೊ. ಈಗ ಹಂಗೆಲ್ಲ ಮಾರ್ಕೆಟಿಲಿ ವ್ಯಾಪಾರ ಭರ್ಜರಿ ನಡ್ತದೆ. ಯಾಗ ಬೇಕಾರೂ ಸಿಕ್ಕಿದೆ. ಈಗ ಎಲ್ಲವೂ ಕಲ್ತ್‌ಕಂಡೊಳೊ.

ಪುಷ್ಪ : ಹಳ್ಳಿಗಳ್‌ಲಿ ಕೃಷಿಕರ್ ಮಳೆಗಾಲಕೆಂತೇಳಿ ಬೆಳ್ಸುವ ಸ್ವಾಂತೆಕಾಯಿ ಬೆಳ್ಳೆರಿಕಾಯಿ. ಕೆಂಬಡೆಕಾಯಿ, ಬೂದಿಕುಂಬಳಕಾಯಿ, ಸಿಹಿಗೆಣ್‌ಸ್, ಇಲಾತ್‌ಕಾಳ್, ಹಲ್ಸ್‌ನ ಬೀಜ, ಜ್ವಾಳ ಇದರ್‌ನೆಲ್ಲ ಜ್ವಾಪಾನಾಗಿ ಮಡ್ಕೊಂಬ ಕಾಲಯಿತ್ತ್. ಹಲ್‌ಸಿನ ಹಣ್ಣ್‌ನ ಕೂಗಲೆ ಹಿಟ್ಟ್ ಹಪ್ಪಳ, ಚೆರ್‌ಮೆಸೊಪ್ಪು, ಚಗ್‌ತೆಸೊಪ್ಪು, ಗಿಣ್‌ಕೆ ಸೊಪ್ಪು, ಒಂದಾ ಎರಡಾ? ರೈತಂಗೆ ಸಂತೆಗೆ ಹೋಗುವ ಕೆಲ್‌ಸನೆಯಿಲ್ಲೆ.

ಇನ್ನ್ ಮಳೆಗಾಲ ಕಂಯ್ಯುಳಿ, ನಿಂಬುಳಿ, ಪೇರ್ಲ ಹಣ್ಣ್, ಚೋಳಿಹಣ್ಣ್, ಮಡ್‌ಕೆ ಹಣ್ಣ್, ಮಜ್ಜಿಗೆ ಹಣ್ಣ್, ಸಾಕಸ್ಟ್ ಸಿಕ್ಕಿದೆ. ಇದರ್ಲಿ ಜ್ಯಾಂ, ಜ್ಯೂಸ್, ವೈನ್ ಮಾಡಿ ಮಡ್‌ಕಂಡ್ರೆ ಬ್ಯಾಸಿಗೆಗೆ ನೆಂಟ್ರ್ ಬಾಕನ ಕೊಡಿಕಾದೆ.

ಗಂಗು : ಕಂಯ್ಯುಳಿತೇಳ್‌ಕನ ಗ್ಯಾನಾತ್ ನೋಡಿ. ಉದ್ದಕೈ ರವುಕೆ ಹಾಕಿ ತಲೆಗೆ ಚೆಕ್ಕ್‌ನ ವಸ್ತ್ರನ ಬಿಗಿಕಟ್ಟಿ ಮುಕ್ಕಾಲ್ ಮಣೆ ಮಡ್ಗಿ ಹಿರಿಯೊವುಕೆ ಇಕ್ಕಿದ ಮ್ಯಾಲೆ ಸಾಲಾಗಿ ಕುದ್ದ ಮಕ್ಕಳಿಗೆ ಇಕ್ಕುವ ಅವ್ವಂದ್ರ್‌ನ ಗ್ಯಾನಾದೆಲಾ?

ಪುಷ್ಪ : ಹೌದು ಹೌದು ಗ್ಯಾನಾದೆ ನೀವ್ ಹೇಳ್ದಂಗೆ.

✍ಬೈತಡ್ಕ ಜಾನಕಿ ಬೆಳ್ಯಪ್ಪ

## ಪುಸ್ತಕ ವಿಮರ್ಶೆ

# ತಬ್ಲಿ ಮಂಜ

ಪಿ. ಜಿ. ಅಂಬೆಕಲ್ ಎಂಬ ಹೆಸ್ರ್‌ಲಿ ಬರೆವ ಹಿರಿಯ ಬರಹಗಾರರ್ ಪುಟ್ಟಣ್ಣ ಗೌಡ ಅಂಬೆಕಲ್‌ರವರ "ತಬ್ಲಿ ಮಂಜ" ಕೃತಿ ಅರೆಭಾಷೆ ಸಾಹಿತ್ಯಕ್ಕೆ ಸೇರ್ದ ಒಂದು ಅತ್ಯುತ್ತಮ ಗುಣಮಟ್ಟದ ಕಥಾಸಂಕಲನ. ಬರವಣಿಗೆನ ಒಂದು ಭರವಸೆಂತ ತಿಳ್ಕಂಡದ್ ಇಲ್ಲಿನ ಕಥೆಗಳ ಓದಿಕಾನ ನಮ್ಮನುಭವಕ್ಕೆ ಬಂದದೆ. ಇಲ್ಲಿನ ಎಲ್ಲ ಕಥೆಗ ಸ ನಮ್ಮ ತೀವ್ರವಾಗಿ ಆವರಿಸಿಕಂಡದೆ. ಯಾಕೆಂತ ಹೇಳ್ರೆ ಕಲ್ಪನೆಗಿಂತ ಇಲ್ಲಿ ಮನ್ಸ್‌ಂದ ಮೂಡ್ದ ಕಥೆಗಳೆ ಹೆಚ್ಚ್. ಬಾಳ ತಣ್ಣಂಗೆಲಿ ಹೇಳ್ವ ಕಥೆನ ನಿರೂಪಣಾ ಶೈಲಿ ಓದಿಕಂಡ್ ಹೋದಂಗೆ ಭಾರಿ ಪರಿಣಾಮಕಾರಿಯಾಗಿ ತೆರ್ದ್‌ಕಂಡದೆ. ನಾವು ಸ ಅವರ ಕಥೆಗಳ್ಲಿ ಒಂದಾಗಿ ಹೋಗುವಂಗೆ ಮಾಡ್ದು ಅವರ ಕಥೆಗಳ ಗುಣ.

ತುಂಬಾ ಪ್ರಾಮಾಣಿಕವಾಗಿ ಅಭಿವ್ಯಕ್ತಿ ಆದ ಇಲ್ಲಿನ ಕಥೆಗಳ್ಲಿ ಭಾವನಾತ್ಮಕ ಬೆಸುಗೆ ಉಟ್ಟು. "ಚಾಂಪನ ಪೇಚಾಟ" ಕಥೆನ ಒಳನೋಟ ನಮ್ಮನಸ ಹಿಂಡಿ ಬೇನೆ ಮಾಡ್ದೆ. "ಆಹುತಿ" ಕಥೆನ ಪ್ರಾಮಾಣಿಕತೆ ನಮ್ಮ ಹೃದಯಕೆ ಭಾರಿ ತಟ್ಟಿದೆ. ಸಂಪ್ರದಾಯಸ್ಥ ಕುಟುಂಬದ ವಿಚಾರಗಳೆ ಪ್ರಮುಖವಾಗಿ ಇಲ್ಲಿನ ಕಥೆಗಳ ವಸ್ತುಗಳಾಗಿಟ್ಟು. ಲೇಖಕರ ಮನೆ, ಉದ್ಯೋಗ, ಹೆಣ್ಣ್, ಮಕ್ಕ, ಸಂಬಂಧಿಕರ್, ವಿದ್ಯಾರ್ಥಿಗ ಹಿಂಗೆ ಇವರ ಅನುಭವ ಧಾರೆ ವಿಚಾರಗಳ ಬರ್ದಂಗೆ ಇದ್ದರುಸ, ಅದ್ ಸಾರ್ವತ್ರಿಕವಾಗಿ ಮೂಡಿ ಬಂದಿರ್ದು ಇವರ ಸೃಜನಶೀಲ ಬರವಣಿಗೆಗೆ ಸಾಕ್ಷಿ. ಬಹುತೇಕ ಎಲ್ಲ ಬರೆಯವ್ಕೆ ಬರವಣಿಗೆನ ಮೂಲ ಉದ್ದೇಶ ಆತ್ಮತೃಪ್ತಿ ಮತ್ತ್ ಬಿಡುಗಡೆನ ದಾರಿ ಆಗಿದ್ದದೆ. ಅದ್ ಯಾವುದೇ ರೀತಿನ ತೃಪ್ತಿ ಆಗಿರ್ದು ಅಥವ ಯಾವುದೇ ರೀತಿನ ಖುಷಿ, ಬೇನೆಗಳ ಬಿಡುಗಡೆ ಸ ಆಗಿರ್ದ್. ಆದರೆ ಬರವಣಿಗೆಗೆ ಇದರೊಟ್ಟಿಗೆ ಒಳ್ಳೆ ಭಾಷೆನ ಆಯ್ಕೆ, ಘಟನೆಗಳ ನಿರೂಪಿಸುದು ಎಲ್ಲ ಸೇರಿಕಂಡದೆ. ಅರೆಭಾಷೆನ ಶುದ್ಧವಾಗಿ, ಸಮರ್ಥವಾಗಿ ದುಡ್ಸಿಕಂಡ ಇವರ ಕಥೆಗ ಮನಮುಟ್ಟುವಂಗೆ ಉಟ್ಟು. "ಅಪ್ಪನ ಆಸ್ತಿ ಅಪ್ಪನೇ...!? ಕಥೆಲಿ 'ಅಪ್ಪ ಬನ್ನಿ ಉಂಬಂಕೆಂತ ದೊಡ್ಡ ಮಂಜ ರಾಜ ಕರ್ತ್. ಪೂರ್ವಿ ಬಾದುನೆ ಹಂಞ ನೋಡ್ನೋಂತ ಹೇಳ್ದೊ ಮಾಸ್ತ್ರು, ಅದ್ ಇನ್ನೆಲ್ಲಿ ಬಂದದೆ, ಬಾದಾಗಿದ್ದರೆ ಇಷ್ಟೊತ್ತಿಗೆ ಇಲ್ಲಿ ಇರ್ತಿತ್ತ್, ನೀವು ಉಂಬಕೆ ಬನ್ನಿ, ಬಟ್ಲ್ ಇಸಿ ಆವುಟು

ಎಲ್ಲವು ನೀವುಗೆ ಕಾದ್ ಕುದ್ದೊಳ್ಓಂತ ಹೇಳಿಕನ ಬೇರೇನ್ ಮಾಡ್ಲಿಂತ ಉಂಬ ಕೋಣೆಗೆ ಹೋದೊ. ಉತ್ಕೃಷ್ಟವಾದ ಅರೆಭಾಷೆನ ಇಲ್ಲಿ ನಿರೂಪಿಸಿದ ಶೈಲಿ ಚೇತೋಹಾರಿಯಾಗಿಟು.

ಕ್ರಿಯಾಶೀಲ ಕಥೆಗಾರ ಆದವು ತನ್ನ ಜೀವನ ಘಟನೆಗಳಿಗೆ ಸೂಕ್ಷ್ಮ ಸಂವೇದನೆಗಳ ಚೆಲ್ಲಿ ಅದರ ಕಥೆಯಾಗಿಸುವಲ್ಲಿ ಯಶಸ್ವಿಯಾದವೆ. ಕತೆಗಾರರ ಅಂತರಂಗದ ಕನ್ನಡಿಗೆ ಬರಹ ಬಿಂಬ ಆಗಿ ನಿಂತುಟುತ ಇಲ್ಲಿನ ಕಥೆಗಳ ಓದಿಕಾನ ನಮಗನಿಸಿದೆ. ಸಮಾಜದ ಅಂಕುಡೊಂಕುಗಳ ಟೀಕಿಸಿಕಂಡ್, ಎಂಥ ಸಂದರ್ಭ ಬಂದರುಸ ತನ್ನ ಬದ್‌ಕ್‌ನ ಬದ್ಧತೆನ ಬದಲಾಯಿಸದ ಮೇಸ್ತ್ರ ಪಾತ್ರ ನಮ್ಮನೆಲ್ಲ ಬಾಳ ಆಪ್ತವಾಗಿ ತಟ್ಟಿದೆ. ಇಲ್ಲಿರುವ ಎಲ್ಲ ಕಥೆಗಳ್ಲಿಸ ಮೇಸ್ತ್ರು ತಾನ್ ನಂಬಿದ ಮೌಲ್ಯಗಳ ಎಲ್ಲಿಸ ಬುಟ್ಟ್‌ಕೊಡ್ದುಲೆ.

ಕಥೆಗಳ್ಲಿ ತಿಳಿಹಾಸ್ಯದ ಲೇಪನ ಓದುಗರ ಹಿಡ್ಡಿಸುವಲ್ಲಿ ಅತ್ಯಂತ ಯಶಸ್ವಿಯಾದೆ. "ಆಸ್ಪತ್ರೆ ಹಾಸಿಗೆಲಿ...!?" ಕಥೆಲಿ ಹಕ್ಕಲೆ ಬಂದ್ ಕುದ್ದ ಗಂಡಂಗೆ ಒರ್ಗ್ ಹೆಣ್ಣ್ ಕೇಳ್ತ್, ನಂಗೆ ಈಗ ಪ್ರಾಯ ಎಷ್ಟ್? ಸರಿಯಾದ ಉತ್ತರ ಕೊಟ್ಟರೆ ಎತ್ತರ ಆಗಿ ಮತ್ತೊಮ್ಮೆ ಕಾವೇರಿ ಹರಿದು ಗ್ಯಾರಂಟಿಂತ ಗ್ರೇಸಿ, ನಂಗೆ ನೀ ಇನ್ನು ಸಣ್ಣ ಗೂಡೆನೆ, ಈಗೀಗ ಸಣ್ಣ ಗೂಡೆನಂಗೆ ಆಡ್ತ ಒಳಾಂತ ಹೇಳಿ ಪ್ರೀತಿಂದ ಬೋಳಾದ (ಕಿಮೋಥರಪಿನಿಂದ) ತಲೆನ ಪೂಜಿದೊ". ಇಂತ ಹಲವಾರು ಸಾಲುಗ ಇಲ್ಲಿನ ಸಂಕಲನಲಿ ಒಳ. "ಸೂರ್ಯ ಪಡುಲಿ ಮೂಡ್ತ" ಕಥೆಲಿನು ಕುಸಾಲ್‌ಲಿ ಬರ್ದದ್ ನಮ್ಮ ತುಟಿಲಿ ನೆಗೆ ಮೂಡ್ರೆಸ, ಅದರ ಗಂಭೀರತೆ ನಮ್ಮನೆಲ್ಲ ಒಂದ್ ಕ್ಷಣ ಹಿಡ್ದ್ ನಿಲ್ಸಿದೆ. ಮದ್ವೆಗೆ ಗೂಡೆ ನೋಡ್ವ ಸಂದರ್ಭಲಿ ಗೂಡೆಗಿರುವ ವಧು ಪರೀಕ್ಷೆ ಎಂಬ ವಿಚಾರ ಒಮ್ಮೊಮ್ಮೆ ಅದ್ ಕಾಟದಂಗೆ ಆದೊರ ಕಥೆಲಿ ಭಾರಿ ಪೊರ್ಲುಲಿ ಹಿಡಿದಿಟ್ಟೊಳ.

ಇಲ್ಲಿನ ಕಥೆಗಳ್ಲಿ ಸಾಮಾಜಿಕ ಕಳಕಳಿ ಉಟ್ಟು, ಸಂಬಂಧಗಳ ನೊಡುನ ಗೌರವ ಉಟ್ಟು, ಪಾಠದೊಟ್ಟಿಗೆ ಗುರು ಶಿಷ್ಯರ ಸಂಬಂಧ ಹೆಂಗಿರಕು ಎನ್ನುವ ವಿಷಯಸ ಉಟ್ಟು. ಒಟ್ಟ್‌ಲಿ ಶಾಶ್ವತ ಅಲ್ಲದ ಬದ್‌ಕ್‌ಲಿ, ಬದ್‌ಕ್‌ವ ಪರಿನ ಚಿತ್ರಿಸಿದ ಪರಿ ಅಭೂತಪೂರ್ವವಾಗಿ ಮೂಡಿಬಂದುಟು. ಇಲ್ಲಿರ್ವ ಅಷ್ಟ್ ಕಥೆಗಳ್ಲಿ "ಎಂತಾ ಪ್ರೀತಿ ನಿಂದ್" ಕಥೆ ಇದಿಕ್ಕೆ ಒಳ್ಳೆ ಉದಾಹರಣೆ. ಬಂದ ಬದ್‌ಕ್‌ನ ಬಂದಂಗೆ ಕಳಿಯಕು ಮತ್ತ್ ಎದುರಿಸಕು ಎಂಬ ಮನೋಭಾವದ ಹೂರಣ ಇರ್ವ ಈ ಕಥೆಲಿ ಬಂದ ಸಮಸ್ಯೆಗಳ ಎದಿರಿಸಿದ ಪರಿ ಸ ಎಲ್ಲವು ಮೆಚ್ಚುವಂಥದ್ದ್.

ಕಥೆಗಳ ಕಟ್ಟಿದ ನಿಪುಣತೆನೊಟ್ಟಿಗೆ ಮುಖ್ಯವಾಗಿ ಹೇಳಿಕೆ ಇರ್ವ್‌ಂತದ್‌ಂತ ಹೇಳ್ರೆ, ಅರೆಭಾಷೆನ ಅನನ್ಯತೆನ ಎತ್ತಿ ಹಿಡ್ದ ಹಲವಾರ್ ಪದಗ ಇವರ ಭಾಸೆನ ಹಿಡಿತಕ್ಕೆ ಸಾಕ್ಷಿ ಆದೆ. ಸಾಹಿತ್ಯ ಬೆಳ್ದರೆ ಮಾತ್ರ ಭಾಸೆ ಉಳಿಯಕೆ ಸಾಧ್ಯಂತ ನನ್ನ ಅಭಿಪ್ರಾಯ. ಏಕೆಂತ ಹೇಳ್ರೆ ನಾವ್ ಉತ್ಕೃಷ್ಟ ಬಾಸೆನ ಯಾಗೊಳು ಬಳ್ಸುದು ಸಾಹಿತ್ಯಲಿ ಮಾತ್ರ, ಅರೆಭಾಷೆಲಿ ಬರ್ದವೆ ಅಂತಾಕನ ನಾವು ಸೂಕ್ತ ಶಬ್ದಕ್ಕೆ ತುಂಬಾ ಹುಡುಕಾಡುವೆ. ಆಗ ಮಾತ್ರ ಭಾಷೆ ಬೆಳಿಯದು ಅಂತ ನನ್ನ ಭಾವನೆ. ಇವರ ಕಥೆಗಳ್ಲಿ ಬರ್ವ ಕೈಂಪೆ, ಕೆಪ್ಪಟೆ, ಸೋಕು, ಅಂಬೆರ್ಪು, ಕೂಂಟೆಗೆ, ದೂಂಚಿ, ಸೊಯೆ, ಉಬರ್, ಪೆರ್ಚಿ ಕಟ್ಟುದು, ಕೊಂತಣ, ಲಾಚಾರ್, ಬಾಡೆ, ಐಮರ, ಕೋಂಬರೆ, ಪದ್ರಾಡ್, ಕೊಳ್ಪೆ, ಮಡ್ಗ್, ತುರ್ಕುಸುದು, ಪೇಚಾಡ್ದು ಇತ್ಯಾದಿ ಇಂದ್‌ನ ತಲೆಮಾರ್‌ನವ್ಕೆ ಹೆಚ್ಚಾಗಿ ಖಂಡಿತ ಗೊತ್ಲೆ. ನಾನ್ ಸೇರ್ದಂಗೆ ನನ್ನ ತಲೆಮಾರ್‌ನ ಕೆಳಗಿನವೆಲ್ಲ ಅರೆಭಾಷೆಲಿ ಕ್ರಿಯಾಪದಗಳ ಸೇರಿಸ್ಕಂಡ್ ಲಾಯ್ಕ ಮಾತಾಡುವೆ ಹೊರ್ತು ಉಳ್ದಂಗೆ ಕನ್ನಡ, ಇಂಗ್ಲೀಷ್ ಶಬ್ದಗಳ್ನೆ ಹೆಚ್ಚ್ ಉಪಯೋಗ್ಸುವೆ. ಆದರೆ ನಾವುಗೆ ಅಚ್ಚರಿ ಆಗುವಂಗೆ ಇಲ್ಲಿ ಎಲ್ಲ ಸ ಅರೆಭಾಷೆ ಶಬ್ದಗ ಒಳ. ಅರೆಭಾಷೆ ಉಳಿಯಕೆ ಇಂತ ಸಂಕಲನದ ಕೊಡುಗೆ ಅನನ್ಯವಾದದ್.

"ತಬ್ಲಿ ಮಂಜ" ಸೇರ್ದಂಗೆ ಇಲ್ಲಿರ್ವ ಹೆಚ್ಚಿನ ಕಥೆಗ ಸಂಪೂರ್ಣ ಕೌಟುಂಬಿಕ ಕಥೆಗ ಮತ್ತ್ ಗುರುಶಿಷ್ಯರ ಸಂಬಂಧದ ಕಥೆಗಳೆ ಆಗಿದ್ದ್, ಇದರ್ಲಿ ಸಂಬಂಧಗಳ ಸಂತಸ, ಸಂಕಟ, ಹತಾಶೆ ಎಲ್ಲಾ ಉಟ್ಟು. ಇದೆಲ್ಲದರ ಸ ಕೂಲಂಕಷವಾಗಿ ಬರ್ದ ಇದರ್ಲಿ ಪರಿಪೂರ್ಣತೆ ಉಟ್ಟು. ಪ್ರಸ್ತುತ ದಿನಲಿ ಗುರು ಶಿಷ್ಯರ ಸಂಬಂಧ ಸೇರ್ದಂಗೆ, ಕೌಟುಂಬಿಕ ಸಂಬಂಧಗ ಸ ಚೆಲ್ಲಾಪಿಲ್ಲಿಯಾಗಿರ್ವ ಸಂದರ್ಭಲಿ ಇಲ್ಲಿನ ಕಥೆಗ ಪರಿಣಾಮಕಾರಿಯಾಗಿ ನಮ್ಮ ತಟ್ಟಿದೆ. ಅರೆಭಾಷೆನ ಜೀವಂತಿಕೆನ ಕಥೆಗಳ ಮೂಲಕ ಗಟ್ಟಿಯಾಗಿಸಿದ ಅಂಬೆಕಲ್‌ನವ್ಕೆ ಅಭಿನಂದನೆಗ ಹೇಳ್ತ ಅವರ ಬರಹಗ ನಿರಂತರವಾಗಿ ಸಾಗಿಕಂಡ್ ಇರ್ಲಿಂತ ನಾವೆಲ್ಲ ನಿಷ್ಕಲ್ಮಶವಾಗಿ ಹಾರೈಸಮ.

✍ಸಂಗೀತ ರವಿರಾಜ್

## ಗಾದೆ ಗಮ್ಮತ್ತ್ (ಹಿಂದೆನ ಸಂಚಿಕೆಂದ)

244. ಹಂಸಕ್ಷೀರ ನ್ಯಾಯ ಇದ್ದಂಗೆ
245. ಗುಂಡ್ ಕಲ್ಲ್ ಮೇಲೆ ನೀರ್ ಹೊಯ್ದಂಗೆ
246. ಕಿರ್‌ಬೆರ್ಳ್ ಬಾತರೆ ಎಷ್ಟ್ ಬಾಪುದು.
247. ಆಟಿ ಬಿಸಿಲಿಗೆ ದರ್ಗ್ ಬರಬರಹೇಳ್ಕನ
248. ಏರಿದ ಪಿತ್ತ ಇಳಿಕನ ಮುಟ್ಟ
249. ಅತ್ತಿ ಹಂಣ್‌ಲಿ ಹುಳ ಇಲ್ಲದಿರ್ದ.
250. ಸುರುನ ಮಳೆಗೆ ಮೀನು ಉಬರ್ ಹತ್ತಿದಂಗೆ.
251. ಸಸಾರ ಬುಟ್ಟರೆ ತಲೆಮೇಲೆ ಕುದ್ರುದು.
252. ಕಕ್ಕೆ ಕಾರಿಲಿ ಕೋಗಿಲೆ ಮೊಟ್ಟೆ ಇಸಿದಂಗೆ
253. ಕಕ್ಕೆ ಕಾರಿಗೆ ಕೈ ಹಾಕ್ಬಡ ಕೂಡೋಳು ಗೂಡುನ ಸುಮ್ಮನೆ ಬುಡು ಬಡ.
254. ದನ ಮಕ್ಕಳ ನೋಡ್ಕನ ಕೇರೆ ಹಾವಿಗೂ ಬೆನ್ನ್ ತೊರ್ಸಿದೆ.
255. ಹಂದಿ ಮೊರಿನಂಗೆ ಮುಟ್ಟ್‌ಕನ ಮರ್ದುದು.
256. ಸಾರಂಗ ಕೆನೆಕನ ಕುದ್ಕನೂ ಬೊಬ್ಬೆ ಹೊಡ್ಡದೆ.
257. ಉಪ್ಪುನ ರುಚಿ ತಿಳಿಯದಂವ ಯಾರ್.
258. ನಿನ್ನೆನ ಮಳೆಗೆ ಇಂದ್ ಹುಟ್ಟಿದ ಚಗ್ತೆನಂಗೆ.
259. ಕೌಂಟೆಕ್ಯಾಲಿ ಸಿಹಿ ಸಿಕ್ಕುದಾ.
260. ಕಾಯರ ಮರಲಿ ಬೇರೆ ರುಚಿ ಕಾಂಬಕಿಲ್ಲೆ
261. ಕಬ್ಬುಲಿ ಸಿಹಿಯೂ ಹಾಲ್‌ಲಿ ಬೆಣ್ಣೆನಂಗೆ
262. ಒಂಟಿ ಎತ್ತ್‌ನ ಗಾಡಿನಂಗೆ
263. ಗಂಡ ಸೀರೆ ತಾದುಂತ ಉಟ್ಟ ಸೀರೆನ ಕಿಚ್ಚಿಗೆ ಹಾಕಿದಂಗೆ.
264. ಪಾಯಸದಾಸೆಗೆ ಅಂಬ್ಲಿ ಕುಡ್ತ್.
265. ಹೇತ್‌ಕಂಡ್ ತಿಂಬಡ ಅಂದದಕ್ಕೆ ತಿರುಗಿ ತಿಂಬೆ ಅನ್ನುವವನ ಏನ್ ಹೇಳೋಕು.
266. ಋಷಿ ಮೂಲ ನದಿ ಮೂಲ ನೋಡಿಕಾಗದ್
267. ಹೆಂಣ್‌ನ ಮೂಲ ಹುಡ್ಕಿದಂಗೆ.
268. ಗೊತ್ತಾತ ಕೊರ್ಗನ ಕೊಂಗನಾಟ.
269. ಬಿಸ್‌ಲಿಲಿ ಬೆಣ್ಣೆ ಇರ್ಸಿ ಹುಡ್ಕಿದಂಗೆ.

270. ಬದನೆ ಕೊಟ್ಟು ಕುದನೆ ತಕಂಡ ಹಂಗೆ.
271. ಜಾದು ಆಟದ ಮಾವಿನ ಹಂಣ್ ತಿಂದಂಗೆ.
272. ಗೆದ್ದ ಎತ್ತ್‌ನ ಬಾಲ ಹಿಡ್ಕಾಂತ್.
273. ಕುರೆ ಮೈಮೇಲೆ ಹೇನ್ ಬುಟ್ಟಂಗೆ
274. ಕೋಣನ ತರ್ಡ್‌ಗೆ ಕುದ್ಕ ಪಾರಕಾದಂಗೆ
275. ನರ್ಸಣ್ಣ ಬೆಳ್ಬೆರಿಗೆ ಸ್ಮಶಾನಕ್ಕೆ ಹೋದಂಗೆ
276. ಹೆಂಣ್‌ನಾಸೆಗೆ ದೇವೇಂದ್ರ ಹೋಗಿ ಮೈ ಎಲ್ಲ ಯೋನಿ ಆದಂಗೆ.
277. ಹೆಂಣ್‌ನಾಸೆಗೆ ಹೋಕನ ದೆವ್ವ ಅಡ್ಡ ಬಂದಾಂಗೆ
278. ಆಚಾರಿನ ಕೊಡ್ತಿ ಪೆಟ್ಟ್ ಲೆಕ್ಕ ಹಾಕಿದಂಗೆ.
279. ಕೂಜಿ ದೆವ್ವನ ಹುಡ್ಕಿಕೆ ಹೋಗಿ ತಾನೆ ಮಾಯಾತ್.
280. ಮೆಂಟೆನ ಸ್ವರಕ್ಕೆ ಹುಲಿನೂ ಹೆದ್ರಿದೆ.
281. ನೀರಾನೆ ಬೆಗ್‌ರ್‌ನೋಡಿ ನೆತ್ತ್‌ರ್ ಹೋದೆಂತೇಳ್ದಂಗೆ
282. ಕೊತ್ತಿ ತಲೆಲಿ ದೀಪ ಇರ್ಸಿ ಎಲಿ ಬುಟ್ಟಾಂಗೆ
283. ಕಾಡಿಗೆ ಹೋಕನ ಉರಿಯೊಳು ಅಡ್ಡ ಬಂದಾಂಗೆ
284. ಎಣ್ಣೆನ ತೊಳೆಕಾರ್ ಶೀಗೆನೆ ಆಕು.
285. ಕೊರ್ಮನ ಕೈಲಿ ಕುರೆ ಸಿಕ್ಕಿದಂಗೆ
286. ಬೆಡಿ ಹಿಡ್ದವಂಗೆ ಮುಚ್ಚೆ ಗದ್ರಿಸಿದಂಗೆ.
287. ಪುಟ್ಯೊಳೊ ಪಜೆರಳಂಬು ಹುಟ್ಟಿದಂಗೆ.
288. ಕೊಂಬಂಗೆ ಬೆಳ್ದುಟ್ಟು ಮಾರುದ್ದ ಕೊಂಬು.
289. ಸಕ್ಕರೆ ಸನ್ಯಾಸಿನ ಕಥೆ ಇದ್ದಂಗೆ.
290. ಬುದ್ದಿ ಇಲ್ಲದ ಮೊಡ್ಯಾಳನ ಮೊಸಳೆ ಹೊತ್ತತ್.
291. ಮೊಡ್ಯಾಳನ ಕಥೆ ಕೇಳಿ ರಾಮ ಸೀತೆನ ಬುಟ್ಟತ್.
292. ಬುದ್ಧಿ ಇಲ್ಲದ ಆಮೆ ಕೊರಂಗು ಸಹವಾಸ ಮಾಡ್ದಹಂಗೆ.
293. ಕೊಣೆವಂಗೆ ಅಂಗಳ ಡೊಂಕು ದೂರು.
294. ಸೂಳೆ ಸಹವಾಸ ಕೈಲಿದ್ದದ್ ಮುಗೆಕನ ಮುಟ್ಟ
295. ಹುಟ್ಟಿಟ್ಟು ಕೊನಲೆ ಅಯೇರಿಗೆ ಗೊತ್ತಾದು.
296. ಹಾಕಿಟು ನಾಯಿಮರಿ ಹಾಕಿದಾಂಗೆ.
297. ಬಿಸಿ ತುಪ್ಪ ಬಾಯಿಲಿ ಹಾಕಿದಂಗೆ.

298. ಕಾದ ಓಡ್‌ಗೆ ನೀರ್ ಹಾಕಿದಂಗೆ.
299. ಬಿಸಿ ಎಣ್ಣೆಗೆ ನೀರ್ ಹಾಕಿದಂಗೆ.
300. ಧರ್ಮಕ್ಕೆ ಬಸುರಾಗಿ ಹೆರಿಕೆ ಜಾಗ ಇಲ್ಲೆ.
301. ಕೋಂಬರೆ ಕೂಸಿನ ನೋಡಿಕೆ ಜನ ಇಲ್ಲೆ.
302. ಹಾರಂವನ ನಾಮ ಹರದಾರಿ ದೂರ.
303. ಬಂಗುಡೆ ಮೀನ್ ಸಾರ್‌ಗೆ ಬದನೆಕ್ಯಾ ಹಾಕಿಟು.
304. ನಿಧಿ ಎದ್ದ್ ಬಾಕನ ಉಚ್ಚೆನೂ ಬಾತ್.
305. ಕೆಲ್ಸದ ಕಳ್ಳೆಗೆ ಕೂಸಿನ ನೇವನ.
306. ಬಾರ್‌ಕೋಲು ಕಾಸಿ ಹೆಟ್ಟಿದಂಗೆ.
307. ಹಾವುನ ತಲೆಲಿ ಹಿಡ್ಕಂಡ್ ಕುರೆ ಬೊಬ್ಬೆ ಹೊಡ್ದಂಗೆ.
308. ಗಾಳಕ್ಕೆ ಕಚ್ಚಿದ ಮೀನ್ ಎಲ್ಲಿಗೆ ಹೋದು.
309. ಕಣ್ಣಿಗೆ ಸೀರೆ ಕಟ್ಟಿ ಕಾಡಿಗೆ ಬುಟ್ಟಂಗೆ
310. ಉಟ್ಟಿಟು ಚಿಪ್ಪುಳು ತಿರ್‍ಗಿದೆ ಸುತ್ತ.
311. ಹೊರ್ದದೆ ಹೊದ್ರಿ ನಿಲ್ಲಿಕೆ ಎಡೆ ಇಲ್ಲೆ.
312. ಆರ್ ಹೆತ್ತವಳಿಗೆ ಮೂರು ಹೆತ್ತವಳು ಬುದ್ದಿ ಹೇಳ್ದಂಗೆ.
313. ಕೊರ್‍ಚಿದೆ ನೋಡು ಬಿದ್ದುಟು ಬಲೆಗೆ
314. ಆಟದವಂಗೆ ದೊಂದಿಲಿ ಕಣ್ಣ್
315. ಮಾಣಿಕದ ಸರ ಕುರೆಕೈಲಿ ಸಿಕ್ಕಿದಂಗೆ
316. ಬಿದ್ದದೆ ನೋಡು ಕಂಬುಳಿಗುದ್ದು.
317. ತಿರ್‍ಗಿ ತಿಂಬವಂಗೆ ಊರೆಲ್ಲವು ನೆಂಟರೆ.
318. ರಾಮ ಬಾಣದಂಗೆ ಗುರಿ ತಪ್ಪಿಕ್ಕಿಲ್ಲೆ.
319. ಅರ್ವತ್ತಕ್ಕೆ ಅರ್ಲ್ ಮೊರ್‍ಲು.
320. ತಿಕ್ಕಟು ನಾಯಿ ಸೊಣಗು ತೊರ್‍ಸಿಕಣದೆ ಬುಟ್ಟದೆ.
321. ಮೆಚ್ಚಿದವಂಗೆ ಮಸಣಲಿನೂ ಸುಖವೆ.
322. ಹತ್ತಿಟ್ಟುಸೊಕ್ಕು ಕಂಡಲ್ಲಿ ಬುಡ್‌ಕಿಲ್ಲೆ.
323. ಜಟ್ಟಿ ಕೆಳಗೆ ಬಿದ್ದರೂ ಮೀಸೆ ಮೊಣ್ಣಾತಿಲೆ ಅಂತ.

(ಮುಂದುವರ್‍ದದೆ)

✍ 'ಮಾಲಾಗೌ'

# ಬೆದ್ರ್‌ರ್‌ದ್ ಉಪಯೋಗ

ಸಾಧಾರಣ ಅರ್‌ವತ್ತು ಎಪ್ಪತ್ತು ವರ್ಷದ ಹಿಂದೆ ಕಾಡುಗಳ್ಳಲಿ ಬೇಕಾದಷ್ಟ್ ಹಿಂಡ್‌ಗ ಇರ್ತ್‌ತ್. ಆಗನ ಕಾಲಲಿ ಬೆದ್ರ್‌ಂದ ಮನೆ ಕಟ್ಟುತ್ತಿದ್ದೊ. ಬೆದ್ರ್ ಕಡ್ಡ್ ತುಂಡು ಮಾಡಿ, ಮನೆಗೆ ಏಳು ಅಡಿ ಉದ್ದದಷ್ಟ್ ಅಳತೆ ತಕ್ಕಂಡ್, ಎರಡ್ ಬೆರಳ್ ಅಗಲದಷ್ಟ್, ಹಂಗೆ ಮನೆಗೆ ಬೇಕಾದಷ್ಟು ತಟ್ಟಿಗಳ ಒಡ್ಡ್ ನೆರಕೆ ಮನೆಗೋಡೆ ಹೆಣೆಯುತ್ತಿದ್ದೊ. ಮನೆ ಆಯ ಮಧ್ಯಲಿ ಮಾಡ್‌ನಿಲ್ಲಿಕೆ ದೊಡ್ಡ ದೊಡ್ಡ ಮರದ ಕಂಬಗಳ ಹೂಣುತ್ತಿದ್ದ. ಮರದ ಕಂಬಗಳ ಮೇಲೆ ಉದ್ದದ್ ಒಂದು ಬಿಮಾನ್‌ತೇಳಿ ಬೆದ್‌ರಷ್ಟ್ ಉದ್ದದ್ದ್ ಮರ ಮಡಗುತ್ತಿದ್ದೆ. ಮನೆಗೆ ಎಷ್ಟ್ ಉದ್ದ ಬೇಕು ಅಷ್ಟ್ ಬೆದ್‌ರ್‌ಗಳ ತುಂಡುಮಾಡಿ ಬೆದ್‌ರ್ ತುದಿಭಾಗನ ತೂತಮಾಡಿ, ಮನೆ ಭಿಮಾನ್‌ಗೆ ಚೂರ್ದ್ ಆ ಮೇಲೆ ಬೆದ್‌ರ್ ತಟ್ಟಿ ನಾಲ್ಕು ಬೆರಳ್ ಅಗಲದಷ್ಟ್ ಸೀಳ್‌ತಿದ್ದೊ. ಉದ್ದದ ತಟ್ಟಿಗಳ ಗಳ್‌ಗಳ ಮೇಲೆ ಮಡಗಿ ಕಾಡ್ದ್ ಹಾಲ್ ಹಗ್ಗ ತಂದ್ ಬಿಗಿಯಾಗಿ ಮಾಡ್ ಕಟ್ಟ್‌ತಿದ್ದ. ಮಾಡ್‌ಕಟ್ಟಿ ಆದಮೇಲೆ ಬೆದ್‌ರ್ದ್ ದಬ್ಬೆ ಹೆಣ್ಣ್ ಮೂರ್ ನಾಲ್ಕ್ ರೂಂ ಮಾಡ್‌ತಿದ್ದೊ. ಮನೆಪೂರ್ತಿ ದಬ್ಬೆ ಕಟ್ಟಿ ಆದಮೇಲೆ. ಭತ್ತದ ಹುಲ್ಲುನ ಮನೆಗೆ ಹೊದಿಕೆ ಮಾಡ್ತಿದ್ದೊ. ದಬ್ಬೆ ಮನೆಗೆ ಮಣ್ಣ್ ಮೆತ್ತಿಕೆ ಎರಡ್ ದಿನಕೆ ಮುಂದೆ ಮಣ್ಣ್ ಎಳ್ಳಿ ನೀರ್ ಹೊಯ್ದ್ ಮಣ್ಣ್ ಮೆಟ್ಟಿ ಕಲಸಿ ಗುಡ್ಡೆ ಮಾಡಿ ಮಡಗಕು. ಮಾರನೆ ದಿನ ದಬ್ಬೆಗಳಿಗೆ ಮಣ್ಣ್ ಮೆತ್ತಕ್. ಹೊರ ಬದಿಯಿಂದ ಒಳ ಬದಿಂದ ಎಲ್ಲಾ ರೂಂಗಳಿಗೆ ಮಣ್ಣ್ ಮೆತ್ತಿ ಆದಮೇಲೆ ಹೊರ್ಗೆ ಮಣ್ಣ್ ಸೇರ್ಸಿ ಸಾರಣೆ ಮಾಡ್ಕ್. ಆ ಮೇಲೆ ನೆಲಗಳ ಸಾರ್ಸಕು. ನೆರ್ಕೆ ಮನೆ ಎಲ್ಲಾ ರೆಡಿ ಆತ್. ಒಳ್ಳೆಯ ದಿನ ನೋಡಿ ಮನೆ ಕೂಡಕ್. ಹಿಂದಿನ ಕಾಲದ ಜನರ ಕಷ್ಟದ ಬದ್ಕಟ. ಆ ಮೇಲೆ ಮಣ್ಣಿನ ಗೋಡೆ ಮನೆ ಮಾಡಿಕೆ ಸುರು ಮಾಡ್ದೊ. ಆ ಮನೆಗೆ ಸಹ ಬೆದ್‌ರ್ದ್ ಗಳ ಮಾಡಿ ಹಗ್ಗಲಿ ಬೆದ್‌ರ್ ತಟ್ಟಿಗಳ ಕಟ್ಟಿ ಹುಲ್ಲು ಹೊದಿಸಿ, ಮನೆ ಮಾಡ್‌ತಿದ್ದೊ. ದೊಡ್ಡ ದೊಡ್ಡ ಬೆದ್‌ರ್‌ಗಳ ಒಡ್ದ್ ಚದಲೆಗಳ ಮಾಡಿ ಅಟ್ಟ ಮಾಡ್‌ತಿದ್ದ. ಚದಲೆ ಮೇಲೆ ಮಣ್ಣ್ ಹಾಕಿ ಸಾರಣೆ ಮಾಡ್‌ತಿದ್ದ. ಎಲ್ಲಾ ರಡಿ ಆದ ಮೇಲೆ ಅಟ್ಟಲಿ ಭತ್ತದ ಕಡಿಕೆ ಕಟ್ಟ್‌ತಿದ್ದ. ಕುಕ್ಕೆ ಭಟ್ಟಿ ಹಿಂಗೆ ಎಲ್ಲಾ ಸಾಮಾನ್‌ಗಳ ಮಡಗ್‌ತ್ತಿದ್ದ. ಆಗನ ಕಾಲಲಿ ಭತ್ತದಿಂದ ಜೀವನ ಮಾಡಿಕಾತ್. ದುಡ್ಡುಗೆ ತುಂಬಾ ಕಷ್ಟ ಇತ್ತ್. ಈಗಿನಂಗೆ ಕಾಫಿ ತೋಟ ಇತ್ತ್‌ಲೆ. ಇತ್ತೀಚೆಗೆ ಕಾಫಿ ತೋಟ ಏಲಕ್ಕಿ ತೋಟ ಮಾಡ್ದೊ. ಮರದ ಕಂಬ ಹಾಕಿ ಬೆದ್‌ರ್ದ್ ತಟ್ಟಿಮಾಡಿ ಎರಡ್ ಇಂಚ್ ಆಣಿ ಹೊಡ್ದ್ ಬೇಲಿ ಮಾಡ್ದ್. ಆ ಮೇಲೆ ಕಾಫಿ ತೋಟ ಏಲಕ್ಕಿ ತೋಟ ಮಾಡಿಕೆ ಸುರು ಮಾಡ್ದೊ. ಬೆದ್ರ್

ಇಲ್ಲದವು ಬೈನೆ ಕಡ್ಟ್ ಅದರ ಒಡ್ದ್ ಪಾರ್ ಮಾಡಿ ಮರದ ಕಂಬ ಪಾಕಿ ಆಣಿ ಹೊಡ್ದ್ ಬೇಲಿ ಮಾಡಿ ತೋಟ ಮಾಡ್‌ತ್ತಿದ್ದೊ. ಇನ್ನ್ ಮನೆ ಮುಂದೆ ಉಬ್ಬಲು ಮಾಡುವೆ. ಅದಕೆ ಏಳ್ ಅಡಿ ಉದ್ದದ್ ಸ್ವಲ್ಪ ದಪ್ಪದ್ ಬೆದ್‌ರ್ ಬೇಕ್. ದಪ್ಪದ ಬೆದ್‌ರಿಗೆ ಐದು ಸಣ್ಣ ಬಡಿಗೆ ಹೋಗುವಷ್ಟ್ ತೂತ ಮಾಡಕು. ಏಳ್ ಅಡಿ ಉದ್ದದ ಎರಡ್ ಬೆದ್ರ್‌ರ್‌ಗಳ ಏಳ್ ಅಡಿ ದೂರದಷ್ಟ್ ಹೂಣಕ್ಕು. ಆ ಮೇಲೆ ಐದು ಮರದ ಬಡಿಗೆ ಹಾಕ್ದಿದ್ದೊ. ಮುಂಗಾರು ಮಳೆ ಸುರಾಕನ ಬೆದ್ದ್‌ರ್ದ್ ಬಡ್ಡೆಲಿ ಕಣಲೆ ಹುಟ್ಟಿಕೆ ಸುರಾದೆ. ಆಗ ಎಲ್ಲಾವರ ಮನೆಲಿ ಕಣಿಲಿ ಸಾರ್ ಗೈಪು, ಅಕ್ಕಿ ರೊಟ್ಟಿ, ಕಣಲೆ ಗೈಪು ಜತೆಗೆ ಹಂದಿ ಚುಟ್ಟಿ ಹಾಕಿ ಮಾಡಿನೊಡಿ ಬಾರಿ ಲಾಯ್ಕ್ ಆದೆ. ಇನ್ನ್ ಕಣಲೆನ ಸಣ್ಣ ಸಣ್ಣ ಹೋಳಾಗಿ ಮಾಡಿ ನಿಂಬೆ ಹಣ್ಣಿನ ಉಪ್ಪಿನಕಾಯಿ ಜತೆಗೆ ಹಾಕಿ. ಅದರ ಜತೆಗೆ ಹಂದಿ ಚುಟ್ಟಿನ ಹೋಳಾಗಿ ಕೊಯ್ದಿ ಸ್ವಲ್ಪ ಕೆಂಪಾದಂಗೆ ಎಣ್ಣೆ ತೆಗೆಯಿನಿ. ಎಣ್ಣೆ ಆರಿದ ಮೇಲೆ ಚುಟ್ಟಿನ ನಿಂಬೆ ಹಣ್ಣಿನ ಉಪ್ಪಿನಕಾಯಿ ಜತೆಗೆ ಮಿಕ್ಸ್ ಮಾಡಿ. ಒಂದ್ ಎರಡ್ ದಿನ ಕಳ್ದ ಮೇಲೆ ತಿಂದ್ ನೋಡಿ ಅದರ ರುಚಿ.

ಇನ್ನ್ ಸುಮಾರ್ ಉಟ್ಟು ಬೆದ್ದ್‌ರ್ದ್ ಉಪಯೋಗ. ಪಾಲೆಗೆ ಕೊರುಂಬರ್ ಇವು ಕಾಡಿಗೆ ಹೋಗಿ ದೊಡ್ಡ ದೊಡ್ಡ ಬೆದ್ರ್‌ಗಳ ಕಡ್ದ್‌ಕಂಡ್ ಬಂದ್ ಒಡ್ದ್ ಸಣ್ಣ ಸಣ್ಣ ಬಾಸ್‌ಗಳ ಮಾಡಿ ಕುಕ್ಕೆ ಹೆಣ್ದ್ ಮಾರಾಟ ಮಾಡುತ್ತಿದ್ದೊ. ಇನ್ನ್ ಸ್ವಲ್ಪ ಜನ ಕೋಳಿ ಬಲಂಜಿ ತೋಡುಗೆ ಮಡಗುವ ಕೂಳಿ ಗದ್ದೆ ಮೀನಿಗೆ ಮಡಗುವ ಪೊಡ, ಅಕ್ಕಿರೊಟ್ಟಿ ಹಾಕಿಕೆ ಸಣ್ಣ ಪಚ್ಚೆಗ. ಯಾವುದೆಲ್ಲ ಬೇಕು ಅದರನೆಲ್ಲ ಮಾಡುತ್ತಿದ್ದ. ತೋಡುಗಳ ದಾಟಿಕೆ ಎರಡ್ ಮೂರು ಬೆದ್ರ್‌ಗಳ ತುಂಡು ಮಾಡಿ ಪಾಲ ಹಾಕುತ್ತಿದ್ದ. ಹಿಡಿಕಂಡ್ ದಾಟಿಕೆ ಕೈತಾಂಗತೇಳಿ ಉದ್ದದ್ದ ಬಡಿಗೆ ಮಡ್‌ಗ್ತ್ತಿದ್ದ. ದನಗ ತೋಟಕೆ ಹೋಗದಂಗೆ ಬೆದ್ದ್‌ರ್ ತಟ್ಟಿನ ಕುಂಟೆಮಾಡಿ ಕುತ್ತಿಗೆ ಕಟ್ಟುತ್ತಿದ್ದ. ಪಾಲೆಗ ಭತ್ತ ಕಟ್ಟಿಕೆ ಕಡಿಕೆ ಮಾಡಿಕೊಡುತ್ತಿದ್ದ. ನಂಗೆ ಗೊತ್ತಿದಂಗೆ ನಮ್ಮ ಚಾಂಪ ಚಾಮೆವ್ವ ಗ್ಯಾನ ಆತ್. ಚಾಂಪ ತೋಡುಗೆ ವಡ್ಡು ಕಟ್ಟುತ್ತಿದ್ದೊ. ಮುಂಗಾರು ಮಳೆ ಬಾಕನ ಬೆದ್ದ್‌ರ್ದ್ ತಟ್ಟಿಹಾಕ್‌ತ್ತಿದ್ದ. ದೊಡ್ಡ ಮಳೆ ಬಾಕನ ಚಾಂಪ ನನ್ನ ಕರಕಂಡ್ ಹೋಗ್‌ತ್ತಿದ್ದ. ತೋಡುಲಿ ತುಂಬಾ ನೀರ್ ಬಾಕನ ತಾಳೆ ಮೀನ್‌ಗ ತಟ್ಟಿಗಳ ಮೇಲೆ ಬಂದ್ ಪೊಡಕೆ ಬಿಳ್‌ತ್ತಿತ್.

✍ ಕಾಳೆಯಂಡ ತಂಗಮ್ಮ ಅಪ್ಪಚ್ಚ

# ಅಕಾಡೆಮಿ ಇಲ್ಲಿಮುಟ್ಟ ನಡ್ಸಿದ ಕಾರ್ಯಕ್ರಮಗ

| ಕ್ರಸಂ. | ದಿನಾಂಕ | ವಿವರ | ಸ್ಥಳ |
|---|---|---|---|
| 01 | 22–01–2018 | ಅರೆಭಾಷೆ ಸೌಹಾರ್ದ ಸಂಭ್ರಮ | ದುರ್ಗಾ ಪರಮೇಶ್ವರಿ ಕಲಾಮಂದಿರ, ಸುಳ್ಯ |
| 02. | 2–3–2018 | ಕವನ ಕುಂಚ ಕಾರ್ಯಕ್ರಮ–2018 | ಕೊಡಗು ಗೌಡವಿದ್ಯಾ ಸಂಘ, ಮಡಿಕೇರಿ. |
| 03. | 24–06–2018 | ಸಾಹಿತ್ಯ ಶಿಬಿರ ಹಾಗೂ ಸಂವಾದ | ದೇವರಾಜ ಅರಸು ಭವನ, ಮಡಿಕೇರಿ |

ಕರ್ನಾಟಕ ಕೊಡವ ಸಾಹಿತ್ಯ ಅಕಾಡೆಮಿ, ಕರ್ನಾಟಕ ಅರೆಭಾಷೆ ಸಂಸ್ಕೃತಿ & ಸಾಹಿತ್ಯ ಅಕಾಡೆಮಿ ಮತ್ತೆ ಕೊಡಗು ಜಿಲ್ಲಾ ಲೇಖಿಕ & ಕಲಾವಿದರ ಬಳಗದ ಕೂಡುಕೂಟಲಿ ನಡ್ದ ಸಮಾರಂಭ.

| | | | |
|---|---|---|---|
| 04. | 22–07–2018 | ಜಿಲ್ಲಾ ಮಟ್ಟದ ಆಟಿ–ನಾಟಿ ಕೂಡುಕೂಟ | ದೇವಸ್ತೂರು ಗ್ರಾಮ ಮಡಿಕೇರಿ |
| 05. | 29–07–2018 | ಅರೆಬಾಸೆ ಲಿಪಿ ವ್ಯಾಕರಣ ಹಾಗೂ ಭಾಷಾ ಸಬಲೀಕರಣ | ಕೆ.ವಿ.ಜಿ.ಲಾ ಕಾಲೇಜು ಸಭಾಂಗಣ, ಸುಳ್ಯ |
| 06. | 05–08–2018 | ಆಟಿ ಹಬ್ಬ – 2018 | ಒಕ್ಕಲಿಗ ಗೌಡ ಸಮುದಾಯ ಭವನ, ಪುತ್ತೂರು |
| 07. | 12–08–2018 | ಅರೆಭಾಷೆ ಸಂಸ್ಕೃತಿಲಿ ಆಟಿ ಉತ್ಸವ | ಹಾಲೆಮಜಲು, ಸುಳ್ಯ |
| 08. | 15–09–2018 | ತೆಂಕುತಿಟ್ಟು ಯಕ್ಷಗಾನ ನಾಟ್ಯ ಕಾರ್ಯಾಗಾರ | ನಮ್ರತಾ ಕಲಾಮಂದಿರ, ಬೆಳ್ಳಾರೆ |
| 09. | 15–12–2018 | ಅರೆಭಾಷೆ ಸೌಹಾರ್ದ | ಕೊಡಗು ಗೌಡ ಸಮಾಜ |

| | | | |
|---|---|---|---|
| | | ದಿನಾಚರಣೆ | ಮಡಿಕೇರಿ. |
| 10. | 05–01–2019 | ಅರೆಬಾಸೆ ವಿಚಾರ ಸಂಕಿರಣ ಕವಿಗೋಷ್ಠಿ ಸಾಂಸ್ಕೃತಿಕ ಗೌಜಿ | ಶ್ರೀ ಗುರುರಾಘವೇಂದ್ರ ಭಜನಾ ಮಂಡಳಿ, ಜಾಲ್ಸೂರು, ಸುಳ್ಯ |
| 11. | 20–01–2019 | ಅರೆಬಾಸೆ ಪ್ರಕಟಿತ ಪುಸ್ತಕಗಳ ಬಿಡುಗಡೆ, ಅರೆಬಾಸೆ ಗೌಜಿ ಮತ್ತು ಸಾಂಸ್ಕೃತಿಕ ವೈಭವ | ಮಯೂರ ಕಲಾಮಂದಿರ ಕೊಲ್ಲಮೊಗ್ರ |
| 12. | 03–02–2019 | 2018ನೇ ಸಾಲಿನ ಗೌರವ ಪ್ರಶಸ್ತಿ ಸಮಾರಂಭ | ಒಕ್ಕಲಿಗ ಗೌಡ ಸಮುದಾಯ ಭವನ, ತೆಂಕಿಲ, ಪುತ್ತೂರು |
| 13. | 4–3–2019 | ಅರೆಭಾಸೆ ಸಂಸ್ಕೃತಿಲಿ ಕಿಡ್ಡಾಸ ಹಬ್ಬ | ಗಾಳಿಬೀಡು |
| 14. | 17–02–2019 | ಜನಪದ ಆಟಕೂಟ | ಸ. ಪ್ರೌಢಶಾಲೆ, ದುಗ್ಗಲಡ್ಕ. |
| 15. | 18–02–2019 | ಯುವ ಜನತೆ, ಅರೆಭಾಸೆ ಸಾಹಿತ್ಯ ವಿಚಾರಗೋಷ್ಠಿ | ಕುಕ್ಕೆ ಶ್ರೀ ಸುಬ್ರಮಣ್ಯೇಶ್ವರ ಕಾಲೇಜು ಸಭಾಂಗಣ. |
| 16. | 2–3–2019 | ಅರೆಬಾಸೆ ಸಾಹಿತ್ಯ ಸಮ್ಮೇಳನ–2019 | ಗೌಡ ಸಮುದಾಯ ಭವನ ಕೊಡಿಯಲ್ ಬೈಲ್, ಸುಳ್ಯ |
| 17. | 3–3–2019 | ಅರೆಭಾಷೆ ಸಾಂಸ್ಕೃತಿಕ ಜನಪದ ವೈಭವ | ವೆಂಕಟೇಶ್ವರ ಸಭಾಭವನ, ಹಾಲೆಮಜಲು. |

# ಹಿಂಗಾರಕೆ ನೀವೂ ಬರೆನಿ

ಹಿಂಗಾರ ತ್ರೈಮಾಸಿಕ ಪತ್ರಿಕೆಗೆ ನೀವು ಕತೆ, ಪದ್ಯ, ಲೇಖನ, ಅಡುಗೆ, ರಂಗೋಲಿ, ಅನುಭವ, ಗಾದೆ, ಪದಕೋಶ ಇಂತದರೆಲ್ಲ ಬರ್ದ್ ಕಳ್ಸಿ. ಪ್ರಕಟಣೆಗೆ ಆಯ್ಕೆ ಆದ ಸಾಹಿತ್ಯನ ಪ್ರಕಟಿಸಿವೆ. ಬರ್ದರ ಒಮ್ಮೆ, ಇಮ್ಮೆ, ಮತ್ತೊಮ್ಮೆ ಓದಿ ತಿದ್ದಿ ಬರೆನಿ. ಮನ್ಸಿಗೆ 'ಈಗ ಸರಿ ಆತ್'ತ ಆದ ಮೇಲೆ ಘುಲ್‌ಸ್ಕೇಪ್ ಹಾಳೆಲಿ 4 ಪುಟಕ್ಕೆ ಮೀರದಂಗೆ ಒಂದೇ ಕಡೆ ಬರೆನಿ. ಮಾರ್ಜಿನ್ ಬುಟ್ಟ್ ಬರೆನಿ. ಬರವಣಿಗೆ ನಿಮ್ಮ ಸೊಂತದ್ದಾಗಿರ್‌ಲಿ. ಅದೇ ಹಾಳೆಲಿ ನಿಮ್ಮ ಪೂರ್ತಿ ಹೆಸ್ರ್, ವಿಳಾಸ, ದೂರವಾಣಿ ಸಂಖ್ಯೆನ ಕಡ್ಡಾಯ ಆಗಿ ಬರೆನಿ.

ನೆರಳ್ ಪ್ರತಿ (ಝುರಾಕ್ಸ್)ನ ಸ್ವೀಕರ್ಸುದ್ಲೆ. ಈ ಮೇಲಿನ ಸೂಚನೆ ತಪ್ಪುಬೇಡಿ.

ನಿಮ್ಮ ಬ್ಯಾಂಕ್‌ದ್ ಉಳಿತಾಯ ಖಾತೆ ಸಂಖ್ಯೆ, ಬ್ಯಾಂಕ್ ವಿಳಾಸ, ಐ,ಎಫ್.ಎಸ್.ಸಿ. ಕೋಡ್ ಬರೆನಿ.

ಹಿಂಗಾರದ ವಿಳಾಸ :

**ಸಂಪಾದಕರ್**

ಹಿಂಗಾರ ತ್ರೈಮಾಸಿಕ ಪತ್ರಿಕೆ

ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ

1ನೇ ಮಹಡಿ, ಕಾಫಿಕೃಪಾ, ರಾಜಾಸೀಟ್ ರಸ್ತೆ,

ಮಡಿಕೇರಿ – 571 201

ಕೊಡಗು ಜಿಲ್ಲೆ

ಇ-ಮೇಲ್ : arebaseacademy@gamil.com

ವೆಬ್‌ಸೈಟ್ : www.arebhasheacademy.com

ದೂರವಾಣಿ : 08272 223055

## ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕುಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ- ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊಡ್ಕ್ : ಉದಯಕುಮಾರಿ, ಚೆಂಬು.
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.
18.ಬದುಕು : ಎಂ.ಜಿ. ಕಾವೇರಮ್ಮ
19.ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ
20. ಕಾಡ್‌ನ ಮಕ್ಕ : ಕೆ.ಆರ್. ತೇಜ ಕುಮಾರ್
21. ಅಪ್ಪ ಹೇಳ್ದ ಹತ್ತ್ ಕತೆಗ್: ಭವಾನಿ ಶಂಕರ್ ಅಡ್ತಲೆ
22. ನೆಗೆ ಬೇಕ್ ಕೇದಗೆ ಗೊನೆ ಹಾಂಗೆ : ಡಾ॥ ಕರುಣಾಕರ ನಿಡಂಜಿ
23. ತಬ್ಲಿ ಮಂಜ : ಪಿ.ಜಿ.ಅಂಬೆಕಲ್
24. ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು

# ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿದ್ ಅಧ್ಯಕ್ಷರ್ ಮತ್ತೆ ಸದಸ್ಯರ ವಿವರ

**ಶ್ರೀ ಪಿ.ಸಿ.ಜಯರಾಮ**
ಅಧ್ಯಕ್ಷರ್
ಬಿನ್॥ ಚಿನ್ನಪ್ಪಗೌಡ
ಪಾಲ್ತಾಡು ಮನೆ, ಮಡಪಾಡಿ ಅಂಚೆ ಮತ್ತು ಗ್ರಾಮ, ಸುಳ್ಯ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ
ಮೊ. ನಂ 9448625224, 9448528924.

**ಶ್ರೀ ಚಂದ್ರಹಾಸ ರೈ ಬಿ.**
ರಿಜಿಸ್ಟ್ರಾರ್
ಕರ್ನಾಟಕ ಅರೆಭಾಷೆ ಸಾಹಿತ್ಯ
ಮತ್ತು ಸಂಸ್ಕೃತಿ ಅಕಾಡೆಮಿ,
ಮಡಿಕೇರಿ.

**ಶ್ರೀಮತಿ ಕೆ.ಟಿ.ದರ್ಶನ್**
ಅರ್ಥ ಸದಸ್ಯರು ಮತ್ತು
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ
ಮೊ.ನಂ 9483110593

## ಸದಸ್ಯರ್

1. **ಶ್ರೀ ಮಾಧವ ಗೌಡ**
ಕಾಮಧೇನು, ಬೆಳ್ಳಾರೆ, ಸುಳ್ಯ ತಾಲ್ಲೂಕು
ದಕ್ಷಿಣ ಕನ್ನಡ ಜಿಲ್ಲೆ
ಮೊ ನಂ. 9448462163

2. **ಶ್ರೀಮತಿ ತಿರುಮಲೇಶ್ವರಿ**
ಕೋಂ: ಲಕ್ಷ್ಮಣ ಗೌಡ
ಅಬರಡ್ಕ ಮನೆ, ಜಾಲ್ಸೂರೂ ಅಂಚೆ
ಸುಳ್ಯ ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ
ಮೊ ನಂ. 9901430797

3. **ಶ್ರೀ ಚಿದಾನಂದ ಬೈಲಾಡಿ**
ಬಿನ್ ಬಾಬುಗೌಡ
ವಕೀಲರು, ಪುತ್ತೂರು ಸೆಂಟರ್
ಪುತ್ತೂರು 574201
ಮೊ. ನಂ. 9901430797

4. **ಶ್ರೀ ಯತೀಶ್ ಕುಮಾರ್ ಗೌಡ**
ಬಿನ್:ಮೋನಪ್ಪಗೌಡ
ಸಂಪ್ಯಾಡಿ ಮನೆ
ರಾಮಕುಂಜ ಅಂಚೆ ಮತ್ತು ಗ್ರಾಮ,
ಪುತ್ತೂರು ತಾಲ್ಲೂಕು
ದಕ್ಷಿಣ ಕನ್ನಡ ಜಿಲ್ಲೆ
ಮೊ ನಂ. 9686914166

5. **ಶ್ರೀ ಪರಶುರಾಮ ಚಿಲ್ತಡ್ಕ**
ಬಿನ್ ಚಿನ್ನಪ್ಪಗೌಡ
ಚಿಲ್ಲತ್ತಡ್ಕ ಮನೆ
ನಡಗಲ್ಲು ಅಂಚೆ,ನಾಲ್ಕೂರು ಗ್ರಾಮ
ಸುಳ್ಯ ತಾಲ್ಲೂಕು ದಕ್ಷಿಣ ಕನ್ನಡ ಜಿಲ್ಲೆ
ಮೊ ನಂ. 9481959171

6. ಶ್ರೀ ಕೆ.ಟಿ.ವಿಶ್ವನಾಥ್
ಬಿನ್ ತಿಮ್ಮಪ್ಪಗೌಡ
ಕೈಕುಡಿ ಮನೆ, ಸುಳ್ಯ ತಾಲ್ಲೂಕು
ದಕ್ಷಿಣ ಕನ್ನಡ ಜಿಲ್ಲೆ
ಮೊ. ನಂ. 9448464593

7. ಶ್ರೀ ದೇವರಾಜ್ ಬಿ.ಡಿ
ಬಿನ್ ದಾಮೋದರ
ಬೇಕಳ ಮನೆ, ಕರಿಕೆ ಗ್ರಾಮ, ಮಡಿಕೇರಿ
ಮೊ ನಂ. 9448869861

8. ಶ್ರೀ ಬಾರಿಯಂಡ ಜೋಯಪ್ಪ
ಬಾರಿಯಂಡ ಮನೆ
ಮದೆ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲ್ಲೂಕು
ಮೊ ನಂ. 9481770584

9. ಶ್ರೀಮತಿ ಕಡ್ಲೇರ ತುಳಸಿ ಮೋಹನ್
ಬೆಟ್ಟಗೇರಿ ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು
ಮೊ ನಂ, 9483110940

10 ಶ್ರೀಮತಿ ಶ್ವೇತಾ ಮಡಪ್ಪಾಡಿ
ಅಂಚೆ ವಿಳಾಸ:
ಮನೆ ನಂ 19/20ಎ, 6ನೇ ಮುಖ್ಯ ರಸ್ತೆ
7ನೆ ಅಡ್ಡರಸ್ತೆ, ಸರಸ್ವತಿ ಪುರಂ, ಮೈಸೂರು-09
ಮೊ ನಂ. 7019188932

11. ಶ್ರೀ ಎ. ಕೆ. ಹಿಮಕರ
ಗುತ್ತಿಗಾರು ಅಂಚೆ
ಸುಳ್ಯ ತಾಲ್ಲೂಕು ದ.ಕ 574218
ಮೊ ನಂ 9481267121

12. ಶ್ರೀ ಪ್ರಸನ್ನ ಕೆ.ಟಿ
ಬಿನ್: ತಿಮ್ಮಯ್ಯ ಕೆ.ಎ
"ಕಾಫಿಕಳ ಎಸ್ಟೇಟ್ "
ಮಕ್ಕಂದೂರು ಗ್ರಾಮ ಮತ್ತು ಅಂಚೆ
ಮಡಿಕೇರಿ ತಾಲೂಕು,ಕೊಡಗು ಜಿಲ್ಲೆ
ಮೊ ನಂ 9480022923

13. ಶ್ರೀ ಕೆ.ಎ.ಮೊಣ್ಣಪ್ಪ
ಬಿನ್: ಅಪ್ಪಚ್ಚ ಕೆ.ಎ
ಬ್ಲಾಕ್ ನಂ 09,"ಕೌಸ್ತುಭ ನಿಲಯ"
ಹೋಟೆಲ್ ಕೂರ್ಗ್ ಇಂಟರ್ ನ್ಯಾಷನಲ್ ಹಿಂಭಾಗ,
ಕಾನ್ವೆಂಟ್ ರಸ್ತೆ ಮಡಿಕೇರಿ.
ಮೊ ನಂ 9844187261

14. ಶ್ರೀ ಸುರೇಶ್ ಎಂ.ಹೆಚ್
ಬಿನ್: ಹುಕ್ರಪ್ಪ ಗೌಡ
ಅಮೈ, ಮಡಪ್ಪಾಡಿ, ಉಬರಡ್ಕ
ಮಿತ್ತೂರು ಗ್ರಾಮ, ಸುಳ್ಯ
ಮೊ ನಂ 9449387181

15. ಶ್ರೀ ದಯಾನಂದ ಆಲಿಯಾಸ್
ದಿನೇಶ್ ಹಾಲೆಮಜಲು
ಬಿನ್: ಯು.ಡಿ.ಮಂಜುನಾಥ ಗೌಡ
ಹಾಲೆಮಜಲು ಮನೆ, ನಾಲ್ಕೂರು ಗ್ರಾಮ
ನಡುಗಲ್ಲು ಅಂಚೆ, ಸುಳ್ಯ, ದ.ಕ
ಮೊ.ನಂ 9448981963
08257-282179

# ಲೇಖಕರ ಹೆಸ್ರ್ ಮತ್ತೆ ವಿಳಾಸ

| | |
|---|---|
| ಕೆ. ಆರ್. ಗಂಗಾಧರ, | ಕುರುಂಜಿ, ಅರಂತೋಡು |
| ಪ್ರಜ್ವಲ್ ಬೊಳ್ತಾಜೆ | ಬೊಳ್ತಾಜೆ ಮನೆ, ಚೆಂಬು ಗ್ರಾಮ, ಬಾಲಂಬಿ ಅಂಚೆ, ಮಡಿಕೇರಿ ತಾಲ್ಲೂಕು, ಮೊ : 9845787414. |
| ಎಂ. ಜಿ. ಕಾವೇರಮ್ಮ | 'ನಿಸರ್ಗ', ಮಾವಜಿ ಸಿ.ಎ. ಬ್ಯಾಂಕ್ ಹಿಂಬದಿ ಸುಳ್ಯ, ದ. ಕ – 574239 |
| ಉಮೇಶ ಬಿಳಿಮಲೆ | ಕಲ್ಮಕಾರು, ಸುಳ್ಯ, ದ. ಕ |
| ಕುತ್ಯಾಳ ನಾಗಪ್ಪ ಗೌಡ (ಕಿರಣ) | ಕಿರಣ ಕುಟೀರ, ಸುಳ್ಯ : 574239, ಮೊ : 9448297221 ಇ–ಮೇಲ್ : kngkirana@gmaill.com |
| ಡಾ॥ ಜ್ಞಾನೇಶ್ ಎನ್. ಎ. | ನಿಡ್ಯಮಲೆ ಮನೆ, ಪ್ರಾಂಶುಪಾಲರು, ಕೆ.ವಿ.ಜಿ. ಇಂಜಿನಿಯರಿಂಗ್ ಕಾಲೇಜು, ಸುಳ್ಯ ದ. ಕ. ಫೋನ್ : 08257–231141, 232811 |
| ಕುಲ್ಲಚನ ಕಾರ್ಯಪ್ಪ | ಕುಂಬಳದಾಳು ಗ್ರಾಮ, ಅರ್ವತ್ತೊಕ್ಲು ಅಂಚೆ – 571201, ಮಡಿಕೇರಿ ತಾಲೂಕು, ಮೊ : 9481148494 |
| ಕಾವೇರಿ ಮನೆ ಡಾ॥ ಬೋಜಪ್ಪ | ಆರ್.ಟಿ. ನಗರ, ಬೆಂಗಳೂರು, #ನಂ. 22, "ಕಾವೇರಿ", 6ನೇ ಮುಖ್ಯರಸ್ತೆ, ನಾರಾಯಣಪ್ಪ ಬಡಾವಣೆ, ಆರ್.ಟಿ.ನಗರ 2ನೇ ಬ್ಲಾಕ್, ಬೆಂಗಳೂರು – 560032 ದೂರವಾಣಿ : 080–233341. ಮೊ : 9738450971 |
| ಸರೋಜಿನ ಗಂಗಯ್ಯ ಎಂ. ಎ. | ಮುಳುಗಾಡು ಮನೆ, ವಳಲಂಬೆ, ಗುತ್ತಿಗಾರು ಗ್ರಾಮ ಸುಳ್ಯ ತಾಲೂಕು, ದ. ಕನ್ನಡ ಜಿಲ್ಲೆ.. ಮೊ : 8277201137 |
| ಸೆಟ್ಟೋಜನ ಗೀತ ಪದ್ಮನಾಭ | ಬಿ. ಬಾಡಗ ಗ್ರಾಮ, ಚೇರಂಬಾಣೆ ಅಂಚೆ, ಮಡಿಕೇರಿ ತಾಲೂಕು, ಮೊ : 9483332783 |
| ಕಟ್ರತನ ಲಲಿತಾ ಅಯ್ಯಣ್ಣ | ಗೌಳಿಬೀದಿ, ಮಡಿಕೇರಿ |
| ರಮ್ಯಶ್ರೀ ನಡುಮನೆ | 'ನಡುಮನೆ' ನಾರ್ಣಕಜೆ, ಸುಳ್ಯ ದ.ಕ. – 574248 ಮೊ : 9449916719 |
| ಭವ್ಯಶ್ರೀ ಕರಂಗಲ್ಲು | W/o ಭರತ್ ಗೌಡ, ಕರಂಗಲ್ಲು, ದೇವಚಳ್ಳ ಮನೆ, ಹರಿಹರ – ಪಲ್ಲತ್ತಡ್ಕ. ಮೊ : 9481245092. |
| ಉದಯಕುಮಾರಿ ಚೆಂಬು | ಮಾಳಿಗೆ ಮನೆ (ಪೂಜಾರಿಗದ್ದೆ), ಬಾಲಂಬಿ ಅಂಚೆ, ಎಂ. ಚೆಂಬು ಗ್ರಾಮ, ಮೊ : 9632900436. |
| ಡಾ. ಕೋರನ ಸರಸ್ವತಿ ಪ್ರಕಾಶ್ | ಪ್ರಾಧ್ಯಾಪಕರು, ಪ್ರಥಮ ದರ್ಜೆ ಮಹಿಳಾ ಕಾಲೇಜು, ಮಡಿಕೇರಿ |
| ಬೈತಡ್ಕ ಜಾನಕಿ ಬೆಳ್ಯಪ್ಪ | ರೇಸ್‌ಕೋರ್ಸ್ ರಸ್ತೆ, ಮಡಿಕೇರಿ |
| ಸಂಗೀತ ರವಿರಾಜ್ | ಹೊಸೂರು, ಚೆಂಬು. ಮಡಿಕೇರಿ ತಾಲೂಕು,ಕೊಡಗು ಜಿಲ್ಲೆ. ಮೊ : 7259135346. |
| 'ಮಾಲಾಗೌ' | ಎಂ. ಲಕ್ಷ್ಮಣಗೌಡ, ಮಾಯಿಪನ ಮನೆ, ಮಡಪ್ಪಾಡಿ ಗ್ರಾಮ ಸುಳ್ಯ ತಾಲೂಕು, ದ.ಕ ಜಿಲ್ಲೆ.. ಮೊ : 9483923310 |
| ಕಾಳೆಯಂಡ ತಂಗಮ್ಮ ಅಪ್ಪಚ್ಚ | ಬಿಳಿಗೇರಿ, ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ. |







2–3–2019 ರಂದ್ ಗೌಡ ಸಮುದಾಯ ಭವನ ಕೊಡಿಯಾಲ್‌ಬೈಲ್ ಸುಳ್ಯಲಿ ನಡ್ದ ಸುರೂನ ಅರೆಭಾಷೆ ಸಾಹಿತ್ಯ ಸಮ್ಮೇಳನ





03.03.2019 ರಂದ್ ವೆಂಕಟೇಶ್ವರ ಸಭಾಭವನ ಹಾಲೆಮಜಲುಲಿ ನಡ್ದ
ಅರೆಬಾಷೆ ಸಾಂಸ್ಕೃತಿಕ ಜನಪದ ವೈಭವ ಸಮಾರಂಭ







04.03.2019 ರಂದ್ ಮಡಿಕೇರಿ ತಾಲೂಕಿನ ಗಾಳಿಬೀಡುಲಿ ನಡ್ದ
ಅರೆಬಾಷೆ ಸಂಸ್ಕೃತಿಲಿ ಕಿಡ್ದಾಸ ಹಬ್ಬದ ನೋಟ

HINGARA

Date: 31.03.2019 Kodagu

Arebhashe Quarterly Volume -3, Issue -9

KARARB/2016/69571 Price : 20/- Pages : 82




3-2-2019ರಂದ್ 2018ರ ಸಾಲಿನ ಅಕಾಡೆಮಿನ ಗೌರವ ಪ್ರಶಸ್ತಿ ಪ್ರದಾನ ಸಮಾರಂಭ
ಒಕ್ಕಲಿಗ ಗೌಡ ಸಮುದಾಯ ಭವನ, ತೆಂಕಿಲ, ಪುತ್ತೂರು,

Printed by CHANDRA HASA RAI B. on behalf of Registar, Karnataka Arebhase Samskruthi Mathu Sahitya Academy, and, Published by CHANDRA HASA RAI B. on behalf of registar of registar Karnataka Arebhashe Samskruthi Mathu Sahitya Acadamy on behalf of KARNATAKA AREBHASE SAMSKRUTHI MATHU SAHITHYA ACADEMI (name of woner) and Printed at SRI KRISHNA COMPUTERS & PRINTERS, Pooja Arcade, Madikeri, Kodagu District. And Published at Karnataka Arebhashe Samskruthi Mathu Sahithya Academy, Coffee Krupa Building, 1st Floor, Raja Seat Road, Madikeri, Kodagu District. Editor : CHANDRA HASA RAI B.

Prtd @ Sri Krishna Printers Mob : 94481 35592